MAHASHIVARATHRI ISSUE.

"Service of the Poor is the Service of God"

# "ಬಡವರ ಬಂಧು"

## ಮಂಗಳೂರು

BADAVARA BANDHU or THE FRIEND OF THE POOR
MANGALORE.

A HIGH CLASS CANARESE MONTHLY.

ಪುಷ್ಪ ೨. FEBRUARY, 1934. ಎಸಳು ೮.

*Editor:*—Mangalore Jarappa. *Associate Editor:*—B. Narsappa.

## ವಿಜ್ಞಾಪನೆ.

ಉತ್ತರ ಹಿಂದೂಸ್ಥಾನದಲ್ಲಾದ ಭೂಕಂಪದಿಂದಾಗಿ ಅಲ್ಲಿ ಸಾವಿರಗಟ್ಟಳೆ ಜನರ ಮರಣವಾಗಿ ಲಕ್ಷಗಟ್ಟಳೆ ಜನರು ಗತಿ ವಿಹೀನರಾಗಿರುವರು. ಚಕ್ರವರ್ತಿಯವರೂ, ವೈಸರಾಯರೂ, ಗವರ್ನರರುಗಳೂ, ಪ್ರಮುಖರೂ ಅಲ್ಲಿನ ಜನರಿಗಾಗಿ ಧನ ಸಹಾಯವನ್ನು ಕೇಳಿರುವರು. ಮದ್ರಾಸು ಗವರ್ನರರು ಈ ಆಧಿಪತ್ಯದವರೊಡನೆ ಅರಿಕೆ ಮಾಡುತ್ತಾ, ಎಲ್ಲರೂ ವೈಸರಾಯ ರಿಲೀಫ್ ಫಂಡಿಗೆ ಸಹಾಯ ಮಾಡಬೇಕಾಗಿ ತಿಳಿಸಿರುವರು. ದಕ್ಷಿಣ ಕನ್ನಡದ ಧನಾಢ್ಯರೂ, ಎಲ್ಲರೂ ಅಲ್ಲಿಯ ಭಾರತೀಯರ ದುರಂತ ಸಂಕಷ್ಟಗಳನ್ನು ನಿವಾರಿಸಲು ಮುಂಬಂದು ತಮ್ಮ ಕೈಲಾದಷ್ಟು ಸಹಾಯವನ್ನು ಮಾಡಲೆಂದು ಬೇಡಿಕೊಳ್ಳುವೆವು.

ಇದರೊಡನೆ

ಇದೇ ಫೆಬ್ರುವರಿ ತಾ. 24—25ರಲ್ಲಿ ದಕ್ಷಿಣ ಕನ್ನಡಕ್ಕೆ ಚಿತ್ತೈಸಲಿರುವ "ಬಡವರ ಬಂಧು" ಮಹಾತ್ಮಾ ಗಾಂಧಿಯವರ ಹರಿಜನ ನಿಧಿಗೂ ನಮ್ಮವರು ಉದಾರತ್ವದಿಂದ ಸಹಾಯ ಮಾಡಲಿ. —ಸಂಪಾದಕ.

ವಾರ್ಷಿಕ ಚಂದಾ—ಪರ ಊರವರಿಗೆ............ರೂ. 1—4—0.

,, ,, — ಊರವರಿಗೆ............ರೂ. 1—0—0.

ಈ ಸಂಚಿಕೆಯ ಬೆಲೆ: 0—1—6.

ಬಡವರ ಸೇವೆಯೇ ಭಗವಂತನ ಸೇವೆಯು.




"BADAVARA BANDHU"

| ಸಂಪುಟ 2 | ಫೆಬ್ರವರಿ 1934. | ಸಂಚಿಕೆ 8 |
|---|---|---|

# ಕಣ್ಣೀರದ ತಿರುಕ

ತಾಯಿಗಳೆ ತಂದಿಗಳೆ
ಸಾಯುವೆನು ಹಸಿವೆಯೊಳೆ
ಕಣ್ಣೀರದ ತಿರುಕಾ
ಬೇಡುವೆನು ಭಿಕ್ಷಾ
ನೀಡಿರಮ್ಮಾ! ತುತ್ತು! ನೀಡಿರಮ್ಮಾ!

ವಯ ಮೂರಿಪ್ಪತು ಮೇಲಾ
ನಡುಗುವವು ಕೈಕಾಲಾ
ತ್ರಾಣೆನಗೆ ಇಲ್ಲಾ
ಒಂದಿಲ್ಲ ಹಲ್ಲಾ
ನೀಡಿರಮ್ಮಾ! ತುತ್ತು! ನೀಡಿರಮ್ಮಾ!

ಹೊಟೆ ತುಂಬ ಒಮ್ಮಿಲ್ಲಾ
ಕೂಳೆಂಬುವದೆ ಬೆಲ್ಲಾ
ಸೇದಿದಾ ಹೊಟ್ಟಿ
ಎಲುಬುಗಳ ಕುಟ್ರಿ
ನೋಡಿರಮ್ಮಾ! ಬೇಗ! ನೀಡಿರಮ್ಮಾ!

ಹಾಕಿರುವೆ ಲಂಗೋಟಿ
ಕುಡಿದದ್ದೆ ಮೊನ್ನೆ ಕಾಟಿ
ಅಯ್ಯೋ ಸಂಕಟಾ
ಹೊಟ್ಟೆಯಾ ಕಾಟಾ
ನೀಡಿರಮ್ಮಾ! ಬೇಗ! ನೀಡಿರಮ್ಮಾ!

ನೋಡದಿರಿ ಕುಂತೆನ್ನಾ
ಒಗೆಯಿತಾ ತುತ್ತನ್ನಾ
ಜೀವ ಹಿಡಿವೆನಮ್ಮಾ
ಹರಸುವೆನು ನಿಮ್ಮಾ
ನೀಡಿರಮ್ಮಾ! ಸಾವ! ತಡೆಯಿರಮ್ಮಾ!

ತಿರುಗುವುದು ನೆಲವೆಲ್ಲಾ
ತಿರುಗುವದು ಬುಡ ಮೇಲಾ
ತಡೆಯಿ ನಾ ಜೋಲಿ
ಬಿದ್ರೆ ನಾ ಖಾಲಿ
ನೀಡಿರಮ್ಮಾ! ಜೀವ! ನೀಡಿರಮ್ಮಾ!

ಕನ್ನಡ ಕಂದ—ತುಂಗಭದ್ರಾ.

# ಬಡವರ ಬಂಧು.

ಲೇಖಕರು:—ಶ್ರೀ. ಕೆ. ಎ. ತಮ್ಮಯ್ಯ, ಬಿ. ಎ. (ಕೊಡಗು)

ಕೊಡಗು ಪ್ರಾಂತ್ಯದಲ್ಲಿ "ಕೋಲು ಪೇಟಿ" ಎಂಬುದೊಂದು ಸಣ್ಣ ಪಟ್ಟಣ. "ಕೋಲ್" ಎಂಬ ಸಾಹೇಬನು ಈ ಪಟ್ಟಣವನ್ನು ಕಟ್ಟಿಸಿದ ಕಾರಣ ಇದಕ್ಕೆ "ಕೋಲ್ ಪೇಟೆ ಎಂಬ ಹೆಸರು ಬಂತಂತೆ.

ಈ ಪಟ್ಟಣದ ಸ್ವಲ್ಪ ಆಚೆ "ಕಾವಾಡಿ" ಎಂಬುದೊಂದು ಚಿಕ್ಕ ಗ್ರಾಮ. ಈ ಗ್ರಾಮಕ್ಕೆ ಮಲ್ಲಪ್ಪನೇ ಧನಿಕನು. ಧನಿಕನಾದರೂ ಇವನು ದಯಾಳಿ! ಇವನ ಪತ್ನಿಯ ಹೆಸರು ವೆಂಕಮ್ಮ. ವೆಂಕಮ್ಮನಿಗೆ ತನ್ನ ಪತಿಯ ಎಲ್ಲಾ ಗುಣಗಳು ಒಗ್ಗುತ್ತಿದ್ದುವು. ಆದರೆ, ಆಕೆಯ ಮಟ್ಟಿಗೆ ಅವನು ಏಕ ಗುಣಹೀನನಾಗಿದ್ದನು. ಅವನ ದಯಾಪರತೆಯೇ, ಅವನ ಗುಣಹೀನತೆ! ಅವನು ಇತರರಲ್ಲಿ ಗುಣ ತೋರಿಸುವುದನ್ನು ಕಂಡರೆ, ವೆಂಕಮ್ಮನಿಗೆ ತಡೆಯಲಾರದ ಕೋಪ!

ಮನೆ ಸೇವಕರಿಗಾದರೋ, ವೆಂಕಮ್ಮನು ಹೆಣ್ಣು ಹುಲಿ! ಆಕೆಯೆಂದರೆ ಸರ್ವರೂ ಹೆದರುವರು. ಅವರು ಕೆಲಸ ಮಾಡುವಲ್ಲಿಗೆ ವೆಂಕಮ್ಮನು ಹೋದರೆ, ಅವರಿಗೆ ಭಯ! ಮಲ್ಲಪ್ಪನು ಹೋದರೆ ಸಂತೋಷ! ಮಲ್ಲಪ್ಪನು ಮನೆಗೆ ಹೋಗುವ ಯಾರನ್ನಾದರೂ, ಎಲ್ಲಿಗೆ ಹೋಗುವುದೆಂದು ಕೇಳಿದರೆ "ವೆಂಕಮ್ಮನಲ್ಲಿಗೆ ಹೋಗಿ ಬರುತ್ತೇನೆ" ಎಂದು ಉತ್ತರವೀಯುವನು. ಊರಿನ ಆರಾದರೂ, "ವೆಂಕಮ್ಮನ ಮನೆ" ಎಂದು ಹೇಳುತ್ತಿದ್ದರೇ ಹೊರತು ಮಲ್ಲಪ್ಪನ ಹೆಸರನ್ನೇ ಎತ್ತುತ್ತಿರಲಿಲ್ಲ.

ಮಲ್ಲಪ್ಪ ವೆಂಕಮ್ಮರಿಗೆ–ತಾಮಸನೆಂಬ ಓರ್ವನೇ ಪುತ್ರನು. ಇವನು ಕೋಲು ಪೇಟೆಯ ಪ್ರಾಥಮಿಕ ಶಾಲೆಯಲ್ಲಿ ಮೂರನೇ ತರಗತಿಯಲ್ಲಿ ಕಲಿಯುತ್ತಿದ್ದನು.

ಮಲ್ಲಪ್ಪನ ನೆರೆಯವಳೊಬ್ಬಳು ವೃದ್ಧ ವಿಧವೆ. ಅವಳು ಆರು ವರ್ಷ ಪ್ರಾಯದ ಪದ್ಮಾವತಿಯೆಂಬ ತನ್ನ ಮಗನ ಪುತ್ರಿಯೊಂದಿಗೆ ದುಡಿದು ಜೀವಿಸುತ್ತಿದ್ದಳು. ಅವಳು ಬಡವಳು. ಆದರೆ ಹುಟ್ಟು ಬಡವಳಲ್ಲ. ಆಕೆಯು ಧನವಂತನ ಮಗಳಾಗಿ ಹುಟ್ಟಿ ಒಬ್ಬ ಧನವಂತನಿಗೆ ಮದುವೆಯಾಗಿದ್ದಳು. ಆದರೆ ವಿವಾಹವಾದ ಎರಡು ವರ್ಷಗಳಲ್ಲೇ ವೈಧವ್ಯವು ಪ್ರಾಪ್ತವಾಗಲು, ತನ್ನ ಪತಿಯ ಎಲ್ಲಾ ಆಸ್ತಿಯನ್ನು ತಾನೇ ನಡೆಸುತ್ತಾ, ತನ್ನ ಒಂದು ವರ್ಷ ಪ್ರಾಯದ ಬಾಲಕನೋರ್ವನೊಡನೆ ಜೀವನ ಕಳೆಯುತ್ತಿದ್ದಳು. ಈ ಬಾಲಕನು ಪ್ರಾಪ್ತ ವಯಸ್ಕನಾದೊಡನೆಯೇ ಇವನನ್ನು ಮಡಿಕೇರಿಯ ಹೈಸ್ಕೂಲಿಗೆ ಕಳುಹಿಸಿದಳು. ಇಲ್ಲಿ ಅವನು ವಿದ್ಯೆಯ ಬದಲು ಸಿಗರೇಟು, ಚುಟ್ಟಾ, ಸರಾಯಿ ಮುಂತಾದುವುಗಳನ್ನು ಸೇವಿಸಲು ಕಲಿತು ಮರಳಿದನು. ತನ್ನ ಇಚ್ಛೆಯಂತೆಯೇ ಹದಿನೇಳನೇ ವರ್ಷದಲ್ಲೇ, ಓರ್ವ ಸೌಂದರ್ಯವತಿಯನ್ನು ಮದುವೆಯಾದನು. ಆದರೆ, ತನ್ನ ಪತ್ನಿಗೂ ಮಾತೆಗೂ ಚಿತ್ರ ಹಿಂಸೆಯನ್ನು ಕೊಡುತ್ತಿದ್ದನು. ದುರ್ನಡತೆಯಿಂದ ಇದ್ದ ಆಸ್ತಿಯೆಲ್ಲವನ್ನೂ ಕಳೆದುಕೊಂಡು ವಿವಾಹವಾದ ನಾಲ್ಕೈದು ವರ್ಷಗಳಲ್ಲೇ, ನಾಲ್ಕು ವರ್ಷ ಪ್ರಾಯದ ಬಾಲೆಯನ್ನು ಬಿಟ್ಟು ಮಡಿದನು. ಇವನು ಸತ್ತ ಒಂದು ವರ್ಷದಲ್ಲೇ ಇವನ ಪತ್ನಿಯೂ ಮಡಿದಳು. ಐದು ವರ್ಷ ಪ್ರಾಯದ ಪದ್ಮಾವತಿಯನ್ನು ಆಕೆಯ ಅಜ್ಜಿಯೇ ಸಾಕುತ್ತಿದ್ದಳು. ಆದರೇನು, ತನಗೆ ಆರು ವರ್ಷ ತುಂಬುತ್ತಲೇ ಪದ್ಮಾವತಿಯ ಅಜ್ಜಿಯೂ ಪರಲೋಕ ಯಾತ್ರೆಯನ್ನು ಮಾಡಿದಳು.

ನೆರೆಯವನಾದ ಮಲ್ಲಪ್ಪನು ಈ ಬಾಲೆಯನ್ನು ಸಾಕುವ ಯೋಚನೆ ಮಾಡಿದನು. ಆದರೆ ವೆಂಕಮ್ಮನು "ಕಂಡ ಕಂಡವರ ಮಕ್ಕಳನ್ನು ನಾವೇಕೆ ಸಾಕಬೇಕು?" ಎಂದು ವಿರೋಧಿಸಿದಳು. ಆದರೆ, ದೇವರು ಇದೊಂದು ಸಮಯದಲ್ಲಿ ಮಾತ್ರ ತನ್ನ ಪತ್ನಿಯನ್ನು ಮೀರುವ ಧೈರ್ಯವನ್ನು ಮಲ್ಲಪ್ಪನಿಗೆ ಕೊಟ್ಟನು! ಪದ್ಮಾವತಿಯನ್ನು ತನ್ನ ಮನೆಗೆ ತಂದನು. ವೆಂಕಮ್ಮನು "ಹುಂ, ಆಗಲಿ, ಮನ್ನೆ ಕೆಲಸಕ್ಕೆ ಆಗುತ್ತಾಳೆ" ಎಂದುಕೊಂಡು ಸುಮ್ಮಗಾದಳು. ಇದಾದ ಕೆಲವು ವರ್ಷಗಳಲ್ಲೇ ಮಲ್ಲಪ್ಪನು ಪರಂಧಾಮವನ್ನೈದಿದನು.

ಪದ್ಮಾವತಿಯು ಸರಳ ಸ್ವಭಾವವು ವೆಂಕಮ್ಮನ ಹೃದಯದಲ್ಲಿ ಆಕೆಯ ಮೇಲೆ ದಯೆ ಹುಟ್ಟುವಂತೆ ಮಾಡಿತು. ಪದ್ಮಾವತಿಯು ತಾಮಸನ ಒಡನಾಡಿಯಾದಳು. ಒಬ್ಬರನ್ನೊಬ್ಬರು ಬಿಟ್ಟಿರದಂತಾದರು. ವೆಂಕಮ್ಮನು, ಪದ್ಮಾವತಿಯನ್ನು ಈಗ ಮೆಚ್ಚುತ್ತಿದ್ದಳಾದರೂ, ಆಕೆಯು ಅನಾಥೆ ಹಾಗೂ ಬಡವಳೆಂಬ ಯೋಚನೆ ಬಂದೊಡನೆಯೇ ದ್ರವ್ಯ ಪಿಶಾಚಿಯು ಅವಳನ್ನು ಹಿಡಿದು–ತಾಮಸನಿಗೆ–"ಅವಳೊಡನೆ (ಪದ್ಮಾವತಿಯೊಡನೆ) ಹೆಚ್ಚು ಆಡಬೇಡವೆನೋ" ಎಂದು ಗದರಿಸುತ್ತಿದ್ದಳು.

* * * * *

ತಾಮಸನು ಬಿ. ಎ. ಪರೀಕ್ಷೆಯನ್ನು ಮುಗಿಸಿದನು. ಪದ್ಮಾವತಿಯನ್ನೂ ವೆಂಕಮ್ಮನು ಒಳ್ಳೇ ಮನಸ್ಸು ಮಾಡಿ ಮಡಿಕೇರಿಗೆ ಕಳುಹಿಸಿದ್ದಳು. ಅಲ್ಲಿನ ಬಾಲಿಕಾ ಪಾಠಶಾಲೆಯಲ್ಲಿ ತನ್ನ ಹತ್ತನೇ ತರಗತಿಯ ವ್ಯಾಸಂಗವನ್ನು ಪದ್ಮಾವತಿಯು ಮುಗಿಸಿದಳು.

ಈಗ ಪದ್ಮಾವತಿಗೆ ಸಾಧಾರಣ ಹದಿನಾರು ವರ್ಷ ಪ್ರಾಯ. ಆಕೆಯ ವದನವು ನವವಿಕಸಿತ ಸರಸಿಜದಂತೆ ಪ್ರಫುಲ್ಲವಾಗಿದ್ದಿತು. ಶಾಂತಮಯವಾಗಿ ಹರಿಯುವ ನದಿಯಲ್ಲಿ ಪೂರ್ಣಿಮಾ ಚಂದ್ರನಂತೆ ಪ್ರತಿಬಿಂಬಿತವಾಗಿ ಹೇಗೆ ಪ್ರತಿಯೊಬ್ಬನ ಹೃದಯದಲ್ಲಾದರೂ ಶಾಂತರಸವನ್ನು ಪುಟ್ಟಿಸುವುದೋ, ಅಂತೆಯೇ ಪದ್ಮಾವತಿಯ ವದನವೂ ಕೂಡ ಪ್ರತಿಬಿಂಬಿತವಾದ ಚಂದ್ರನಂತಿದ್ದು, ಶಾಂತಿರಸವನ್ನು ಪುಟ್ಟಿಸುವಂತಾದ್ದಾಗಿದ್ದಿತು. ಮನೋರಂಜಕವಾದೆರಡು ಕಣ್ಣುಗಳು ಚಪಲತೆಯಿಲ್ಲದೆ, ಶಾಂತಿಪೂರ್ಣವಾಗಿದ್ದುವು. ವರ್ಣವಾದರೋ, ವಸಂತಕಾಲದಲ್ಲಿ ಸೂರ್ಯಾಸ್ತವಾದೊಡನೆಯೆ ಪಶ್ಚಿಮ ದಿಗ್ಮಣಿಯು ಧರಿಸುವಂತಹ ವರ್ಣದಂತಿದ್ದಿತು. ಚೆಂಪಕದ ಮೊಗ್ಗೆಯಂತಹ ನಾಸಿಕ! ಚಿಕ್ಕದಾದ ಬಾಯಿಯ ತುಟಿಗಳೆರಡು ಗುಲಾಬಿ ಹೂವಿನ ರಸದಲ್ಲಿ ಮುಳುಗಿ ತೇಲುವಂತೆ ತೋರಿ, ಮಂದಸ್ಮಿತವನ್ನು ಪೊರ ಸೂಸುವಂತಿದ್ದುವು. ದುಂಡಗಾದ ಬಾಹುಗಳು, ದುಂಡಗಾಗಿ ಚಿಕ್ಕವಾಗಿದ್ದ ಕೈಬೆರಳುಗಳು, ಪರಿಪೂರ್ಣವಾದ ದೇಹ,—ಇವುಗಳಿಂದ ಕೂಡಿದ್ದ ಪದ್ಮಾವತಿಯನ್ನು ನೀವೆಂದಾದರೂ ನೋಡಿದರೆ, ಆಕೆಯ ರೂಪವನ್ನು ಮತ್ತೆನ್ನೆಂದಿಗೂ ಮರೆಯಲಾರಿರಿ. ಅಂತೂ, ಪದ್ಮಾವತಿಯು ವಿವಾಹಕ್ಕೆ ಯೋಗ್ಯಳಾಗಿದ್ದಳು.

ತಾಮಸನು ಬಿ. ಎ. ಪರೀಕ್ಷೆಯನ್ನು ಮುಗಿಸಿದೊಡನೆಯೇ ಅವನಿಗೆ ವಿವಾಹ ಮಾಡಿ ಬಿಡಬೇಕೆಂಬ ಆತುರವು ಅವನ ತಾಯಿಗಾಯಿತು. ತನ್ನ ಸಹೋದರನ ಮಗಳನ್ನೇ ಇವನಿಗೆ ಮದುವೆ ಮಾಡಿದರೆ ಹಳೆ ನೆಂಟತನವೂ ಉಳಿಯುವುದಲ್ಲದೆ, ಹದಿನೈದು ಸಾವಿರ ರೂಪಾಯಿ ವರಮಾನವೂ ದೊರಕುವುದೆಂದು ಯೋಚಿಸಿ, ವೆಂಕಮ್ಮನು ಇದರ ವಿಷಯ ಒಳಗೊಳಗೆ ಮಾತನಾಡುತ್ತಿದ್ದಳು.

ಒಂದು ದಿನ ತಾಮಸನು ಮಧ್ಯಾಹ್ನ ಊಟವಾದ ನಂತರ ಒಂದು ಇಂಗ್ಲಿಷ್ ಕಾದಂಬರಿಯನ್ನು ಓದುತ್ತಾ ತನ್ನ ಕೊಠಡಿಯಲ್ಲಿ ಕುಳಿತಿರಲು, ಅವನ ತಾಯಿಯು ಅದೇ ಕೊಠಡಿಗೆ ಹೋಗಿ ಅವನ ಬಳಿಯಲ್ಲಿಯೇ ಕುಳಿತು—"ಮಗೂ, ಬರೇ ಓದುತ್ತಾ, ತಿರುಗುತ್ತಾ ಕಾಲ ಕಳೆದರೆ ಸಾಕೊ? ವ್ಯವಸಾಯವನ್ನು ಸ್ವಲ್ಪವಾದರೂ ಕಲಿಯಬೇಡವೇ? ನಾನು ಹೇಳಿದರೆ ನೀನು ಕೇಳುವುದಿಲ್ಲ. ನಿನಗೆ ಬುದ್ಧಿ ಕಲಿಸಲು ಓರ್ವ ಸೌಂದರ್ಯವತಿಯನ್ನು ನಿನ್ನ ಕೊರಳಿಗೆ ಸುತ್ತಿದರೆ ಆಯಿತು" ಎಂದಳು.

ತಾಮಸ:—ಅದಾರನ್ನು ತರುತ್ತೀಯೇ?

ವೆಂಕಮ್ಮ:—ಆರಾದರೊಬ್ಬಳನ್ನು? ಆರು ಆಕೆಯ ರೂಪಿನಿಂದಲೂ ದ್ರವ್ಯದಿಂದಲೂ ಕುಣಿಸುವಳೋ ಅವಳನ್ನು.

ತಾಮಸನು "ಓಹೋಹೋ" ಎಂದು ನಕ್ಕು ಬಿಟ್ಟನು.

ವೆಂಕಮ್ಮ:—ನಿನ್ನ ಸೋದರ ಮಾವನ ಮಗಳನ್ನೇ ನಿನಗೆ ವಿವಾಹ ಮಾಡಬೇಕೆಂದಿದ್ದೇನೆ. ಅವಳು ರೂಪವನ್ನೂ ಹದಿನೈದು ಸಾವಿರ ರೂಪಾಯಿ ವರಮಾನವನ್ನೂ ತರುವಳು.

ತಾಮಸ:—ನಾನು ಕನ್ಯೆಯನ್ನು ವಿವಾಹವಾಗುವೆನಲ್ಲದೆ ಹಣವನ್ನು ವಿವಾಹವಾಗಲಾರೆನು. ಅಲ್ಲದೆ, ನೀನು ಹೇಳಿದ ಹುಡುಗಿಯಲ್ಲಿ ನನಗೆ ಮನಸ್ಸಿಲ್ಲ.

ವೆಂಕಮ್ಮ:—ಮತ್ತಾರಲ್ಲಿ ನಿನ್ನ ಮನಸ್ಸು?

ತಾಮಸ:—ಪದ್ಮೆಯಲ್ಲಿ.

ವೆಂಕಮ್ಮ:—ಆ ಕಾಸಿಲ್ಲದ, ನಮ್ಮ ಉಪ್ಪಿನಲ್ಲಿ ಬಳೆದ ಆ ಹುಡುಗಿಯಲ್ಲಿ ನಿನಗೆ ಮನಸ್ಸೇ? ನನ್ನ ಮಾನ ಉಳಿಯುವುದೇ? ಅದೆಂದೆಂದಿಗೂ ಆಗದು.

ತಾಮಸ:—ಆಗುವುದೆಂದರೆ ಅದಾಗಬೇಕು, ಇಲ್ಲವಾದರೆ, ನನಗೆ ವಿವಾಹವೇ ಬೇಡ.

ವೆಂಕಮ್ಮ ಕೋಪದಿಂದ ಎದ್ದು ಹೋಗಿ ಬಿಟ್ಟಳು.

* * * * *

ಮೂರು ವರ್ಷಗಳು ದಾಟಿ ಹೋದುವು. ತಾಮಸನಾಗಲೀ ವೆಂಕಮ್ಮನಾಗಲೀ ತಾಮಸನ ವಿವಾಹದ ಮಾತೆತ್ತಲಿಲ್ಲ. ತಾಮಸನು ಮಾತ್ರ ದಿನ ದಿನಕ್ಕೂ ಕ್ಷೀಣವಾಗುತ್ತಾ ಬರುತ್ತಿದ್ದನು. ವೈದ್ಯರಿಗೆ ಎಂತಹ ಕಾಯಿಲೆಯೆಂದು ವಿಶದಗೊಳಿಸಲಿಕ್ಕಾಗಲಿಲ್ಲ. ಕಡೆಗೆ ತಾಮಸನಿಗೆ, ಮಲಗಿದಲ್ಲಿಂದ ಏಳಲಿಕ್ಕೂ ಕೂಡ ಆಗದಂತಾಯಿತು. ಇಂತಿರಲು, ಇಂದು ದಿನ ವೆಂಕಮ್ಮನು ಪುತ್ರನಿಗೆ ಹಾಲು ಕುಡಿಸುತ್ತಿದ್ದಳು. ಆಗ ತಾಮಸನು "ಅಮ್ಮಾ, ನನ್ನ ಮನೋಭಿಲಾಶೆಯು ಪೂರ್ತಿಯಾಗದೆ, ಎಂತಹ ತಿಂಡಿಯಿಂದಲೂ ಏನು ಪ್ರಯೋಜನ?" ಎಂದನು.

ವೆಂಕಮ್ಮ:—ನಿನ್ನ ಮನೋಭಿಲಾಶೆಯಾದರೂ ಏನು?

ತಾಮಸ:—ನಾನು ನಿನಗೆ ಮೂರು ವರ್ಷಗಳಿಗೆ ಮೊದಲೇ ತಿಳಿಸಲಿಲ್ಲವೇ?

ವೆಂಕಮ್ಮನಿಗೆ ತಿಳಿಯಿತು. ಆಕೆಯು ತನ್ನ ಪುತ್ರನು ಪದ್ಮಾವತಿಯನ್ನು ಮದುವೆಯಾಗುವುದಕ್ಕೆ ಒಪ್ಪಿದಳು.

ಐಶ್ವರ್ಯವಂತನಾದರೂ, ವಿದ್ಯಾವಂತನಾದರೂ ಬಡವಳಾದ, ಒಂದು ದುಗ್ಗಾಣಿಯಾದರೂ ತನ್ನದೆಂದು ಹೇಳಲಿಕ್ಕಿಲ್ಲದ ಅನಾಥೆಯಲ್ಲಿ ದಯೆಯಿಟ್ಟು, ತನಗೆ ಸಿಕ್ಕಬಹುದಾದ ಎಷ್ಟೋ ದ್ರವ್ಯವನ್ನು ಕೂಡ ತ್ಯಜಿಸಿ ಪದ್ಮಾವತಿಯನ್ನು ವಿವಾಹವಾದ ತಾಮಸನಲ್ಲವೇ ನಿಜವಾದ ಬಡವರ ಬಂಧು?

—+—

# ಬಡತನವೆ ಬಳಿಗೆ ಬಾರೆ!

ಬಡತನದ ಬಾಳ್ವೆಣ್ಣೆ! ಎನ್ನ ಬಾಳಿನ ಕಣ್ಣೆ!
ಬಂದೆನ್ನ ಬಿಗಿ ಹಿಡಿದು ಪ್ರೇಮದಿಂ—
ದೊಮ್ಮೆನೀ ಮುದ್ದಿಸಬಲೆ! ॥ ಪ ॥

ಬಾಲೆ! ಹಲರಿಲ್ಲಿ ನಿನ್ನಿಂದಾಗಿ
ಕೀರ್ತಿಯಾ ತೋರಣವ ಕಟ್ಟಿದ್ದರು;
ಜಗದಿ ಸಲೆ ಮೆರೆದಿಹರು.
ಸ್ತುತ್ಯಾರ್ಹರಾಗಿಹರು.
ಈಗಲೂ ಅವರ ಹೆಸರಿಗೆ ಕುಂದು ಬಂದಿಲ್ಲ—
ಇನ್ನೆಂದಿಗೂ ಅದಕೆ ಹಾನಿ ಬರುವಂತಿಲ್ಲ.
ಬಡತನವೆ
ಬಾ; ಬಾರೆ ಎನ್ನೆಡೆಗೆ. ನಾನು ಕರೆವೆ! ॥ ೧ ॥

ಎನಿತೆನಿತೊ ಜನ ನಿನ್ನನಾಶ್ರಯಿಸಿ
ಕವಿಕುಲಕೆ ಕಳೆಯಾಗಿ ಕಳೆಗೊಟ್ಟರು.
ಎನ್ನ ಸ್ಫೂರ್ತಿಯ ಮುಡಿಪೆ!
ಎನ್ನ ಭಾವದ ಕದಪೆ!
ಎನ್ನೆದೆಯ ತೋಟದೊಳು ನಿನ್ನೊಲವ ಮಳೆ ಸುರಿಸಿ,
ಕವಿತೆಯಾ ಬುಗ್ಗೆ ಪುಟ ನೆಗೆವಂತೆ ಮಾಡರಸಿ
ಬಡತನವೆ!
ಅದನು ಕಂಡಾವಗಂ ತೋಷ ಬಡುವೆ. ॥ ೨ ॥

ಮನೆಯಿಂದ ಮನೆಗಲೆದು ತಿರಿದುಂಬ
ತಿರುಕನನು ಪಿಡಿದು ಆದರಿಪೆ ನೀನು,
ಇಲ್ಲಿ ತೃಪ್ತಿಯ ಕೊಡುವೆ;
ಅಲ್ಲಿ ಮುಕ್ತಿಯನೀವೆ.
ಆದರೇಂ? ಎನಗವುಗಳಿಚ್ಛೆಯೊಂದಿಷ್ಟಿಲ್ಲ.
ಎನಗೆ ಬೇಕಿದುದೊಂದೆ—ನಿನ್ನುರುವ ಒಡನಾಟ
ಎಲ್ಲವೂ—
ಅದರೊಳೈಕ್ಯತೆಯ ಹೊಂದಿಹುದು; ಬಾರೆ! ॥ ೩ ॥

ಎಲೆ ತರುಣಿ! ನಿನ್ನ ತಿಳಿಯದರಿಲ್ಲ
ಸೃಷ್ಟಿಯಿದು ನಿನ್ನ ಕೊಂಡಾಡದಿಲ್ಲ.
ಗಾಯಕನು ಹಾಡುವನು
ತವ ಕೀರ್ತಿ ಗಾನವನು;
ಚಿತ್ರಿಕನು ಚಿತ್ರಿಪನು ತವ ಭಾವ ಚಿತ್ರವನು,
ನರಶಿಲ್ಪಿ ಕೆತ್ತುವನು ತವ ಶಿಲಾ ವಿಗ್ರಹವ,
ಎಲ್ಲರೂ
ತವ ಸೇವೆ ಮಾಡುವರು ಬಾರೆ ಬೇಗ! ॥ ೪ ॥

ನಾಡ ತೊರೆದಡವಿಯಂ ಸೇರಿರುವ
ತಾಪಸನು ಸಹ ನಿನ್ನ ಬಿಟ್ಟುದಿಲ್ಲ
ಅವನ ಬಿಡದನುಸರಿಪೆ;
ನಿನ್ನನರಿಯದ ಕೆಲರು ತೆಗಳಿದರೆ ನಿನಗೇನು?
ಮೋಡ ಮುಸುಕಿದೊಡೇನು ಸೂರ್ಯನನು? ಕುಂದಿಹುದೆ?
ನೀನೆನಗೆ
ಅರೆ ಬಿರಿದ ಹೂವಂತೆ! ಎನ್ನ ಲಲಿತೆ!! ॥ ೫ ॥

ಬಾಗಿ ಕಾಣುತ ನಿನ್ನ ಚಾಗದೊಳು
ಆನಂದದಿಂ ಮರೆವ ತನ್ನ ತಾನು.
ಹೆಚ್ಚು ಬಣ್ಣಿಸಲೇಕೆ?
ಜಗವೆ ನಿನ್ನೊಳಗಿಹುದು.
ಧನಿಕರನು ಬಡವರನು ಅವರು ಇವರೆಂದೆಂಬ
ಭೇದವಿನಿಸಿಲ್ಲದೆಲೆ ಎಲ್ಲರನು ಪ್ರೀತಿಸುವೆ.
ಬಡತನವೆ!
ಎನ್ನೆಸಕ ಮುಂಗೊರಳೆ! ಬಳಿಗೆ ಬಾರೆ. ॥ ೬ ॥

ಜೀವನದ ಬೇವಸದ ದಾರಿಯಲಿ
ಪೋಗುವೆನ್ನನು ಕಂಡು ನುಡಿಯಿಸೊಮ್ಮೆ;
ನಿನ್ನಧರ ಜಲ ಕುಡಿಸು;
ಎನ್ನ ತೃಷೆಯನು ಹರಿಸು,
ಆಗ ಹಿಂದಣ ಅಳಲು ಮರೆತು ಸುಖವಾಗುವುದು,
ಮುಂದಿನಾ ದಾರಿಯನು ನಡೆವ ಸ್ಫೂರ್ತಿಯು ಬಹುದು
ಎಲೆ ಬಾಲೆ
ದರಿದ್ರ ನಾರಾಯಣಿಯೆ! ಬಳಿಗೆ ಬಾರೆ! ॥ ೭ ॥

'ಮೋಹನ'

+++ +

# "ಅಗೋ ಗುಮ್ಮ!!!"

ಲೇಖಕರು:—ಶ್ರೀ. ಸಂಪಾಜೆ ಮುಂಡಪ್ಪ ರೈ

"ಅಗೋ ಗುಮ್ಮ ಬಂತು! ಉಂ, ಉಮ್ಹಾಂ, ಉಂ, ಉಮ್ಹಾಂ, ಕೂಗುವ ಮಕ್ಕಳನ್ನು ಕೊಂಡು ಹೋಗುವನು. ಹರಟೆ ಮಾಡಬೇಡ, ಕೂಗಬೇಡ, ಭೂತ ಬರುವುದು! ಪ್ರೇತ ಬರುವುದು!'' ಎಂದು ಮುಂತಾಗಿ ನಾನು ಚಿಕ್ಕವನಿರುವಾಗ ಅಮ್ಮನು ನನ್ನನ್ನು ಹೆದರಿಸುತ್ತಿದ್ದಳು. ಬಾಲ್ಯದ ಆ ಹೆದರಿಕೆಯು ಗರ್ಭದಲ್ಲಿ ನಾಟಿ, ಇಂದಿಗೂ ಚಳಿಯನ್ನುಂಟು ಮಾಡುತ್ತಿರುವುದು. ಅದಂತಿರಲಿ—

ಬಾಲ್ಯದ ಆ ದಿನಗಳು ಕಳೆದು ಹೋದವು. ಈಗ ನಾನು ಯೌವನಸ್ಥನು. ನನ್ನ ಸುಖೋಪಭೋಗಗಳಿಗೆ ಕೊರತೆಯೇ ಇಲ್ಲ. ಬೇಕಾದ ವೈಭವ, ಅಂತಸ್ತಿನ ಮನೆ, ಹಣದ ರಾಶಿ, ಪರಿಚಾರಕರು, ಸಾಲದುದಕ್ಕೆ ನವಯೌವನ ಭರಿತಳಾದ ವಿದ್ಯಾವತಿ ಮನಮೋಹಿನಿ ಪತ್ನಿ, ಎಂದ ಮೇಲೆ ನನ್ನ ಆನಂದಕ್ಕೆ ಕಡಿಮೆಯೇನು? ಪುತ್ತಳಿಗೆ ಪುಟ ಕೊಟ್ಟಂತೆಯೇ ಸರಿ.

ನನ್ನ ಹೆಂಡತಿ ಗರ್ಭವತಿ. ಪಕ್ಕನೆ ಒಂದು ದಿನ ಅವಳು ತನಗೆ ಕರಾವಳಿ ಪಟ್ಟಣವಾದ ಮಂಗಳೂರನ್ನೂ ಅಲ್ಲಿಯ ವಿಲಾಸ ಮಂದಿರಗಳನ್ನೂ ಅಲ್ಲಿಯ ವೈಭವಗಳನ್ನೂ ನೋಡಲು ತುಂಬಾ ಆಸೆಯಿದೆಯೆಂದು ಹೇಳಿದಳು. ಗರ್ಭವತಿಯರ ಬಯಕೆಯನ್ನು ಸಲ್ಲಿಸದೆ ನಿರ್ವಾಹವಿಲ್ಲವಷ್ಟೆ—ಅದರಂತೆ—ಒಂದು ದಿನ ನಾವೀರ್ವರೂ ಎರಡು ಜನ ಪರಿಚಾರಕರೊಂದಿಗೆ ಮಂಗಳೂರಿಗೆ ಹೋಗುವ ಬಸ್ಸನ್ನು ಹತ್ತಿದೆವು. ಸಾಯಂಕಾಲವಾಗುವುದರೊಳಗಾಗಿ ಮಂಗಳೂರನ್ನು ತಲಪಿ, ಈಗಿನ ನವನಾಗರಿಕತನದ ಸೌಕರ್ಯಕ್ಕನುಗುಣವಾಗಿ ಹಣವಿದ್ದರೆ ಯಾವುದಕ್ಕೂ ಕುಂದು ಕೊರತೆಗಳಿಲ್ಲದ ಹೊಟೆಲ್ ಡಿ ಮಿನೆರ್ವದಲ್ಲಿ ಇಳಿದುಕೊಂಡೆವು. ಆ ರಮಣೀಯವಾದ ಕಟ್ಟಡದಲ್ಲಿ ಅರ್ಧ ತಾಸನ್ನು ಶ್ರಮ ಪರಿಹಾರಕ್ಕಾಗಿ ಕಳೆದು ಫಲಹಾರದ ನಂತರ ಟೇಕ್ಸಿಯೊಂದನ್ನು ಗೊತ್ತು ಹಚ್ಚಿ ತಿರುಗಾಡಲಿಕ್ಕೆ ಹೊರಟೆವು. ಗಲಭೆಯ ಪಟ್ಟಣದ ದಾರಿಯನ್ನು ಬಿಟ್ಟು ಸುತ್ತಾದ ದಾರಿಗಾಗಿ, ಬೀಚ್, ಪೆಂಟ್‌ಲೇಂಡ್ ಪೇಟೆ, ಮರ್‌ಕೇರಾ ಹಿಲ್, ಕದ್ರಿ ಮೊದಲಾದ ಸ್ಥಳಗಳನ್ನು ನೋಡುತ್ತಾ ಹಳೆಯ ಬಾವಟೆ ಗುಡ್ಡೆಯ ಸಮೀಪಕ್ಕೆ ಬಂದೆವು. ಮಂಗಳೂರು ಪಟ್ಟಣಕ್ಕೇನೇ ಮಧ್ಯದಲ್ಲಿದ್ದು ಎತ್ತರವಾದ ಸ್ಥಳವಿದು. ಆದುದರಿಂದ ಸುತ್ತಮುತ್ತಲಿನ ಪ್ರದೇಶವೆಲ್ಲವೂ ರಮಣೀಯವಾಗಿ ಕಂಗೊಳಿಸುತ್ತಿದ್ದಿತು. ಸಮುದ್ರದ ನೋಟವು ಬಹಳ ಆನಂದಕರವಾಗಿದ್ದಿತು. ನಮ್ಮಂತೆ ಅನೇಕ ಜನರು ಅಲ್ಲಿಗೆ ವಿಹಾರಕ್ಕಾಗಿ ಬಂದಿದ್ದರು. ಸ್ವಲ್ಪ ಸಮಯವನ್ನು ಅಲ್ಲಿ ಕಳೆದು ಮಿನೆರ್ವಕ್ಕೆ ಹಿಂದಿರುಗಿ, ಬಹಳ ಹಸಿದಿದ್ದೆವಾದ್ದರಿಂದ ಊಟಉಪಚಾರಗಳನ್ನು ಬೇಗನೆ ಮುಗಿಸಿ ಕುಳಿತೆವು. ಹೊಟೇಲಿನ ಪರಿಚಾರಕ ಹುಡುಗನೊಬ್ಬನು ಒಂದು ಸಿನೆಮ ನೋಟೀಸನ್ನು ತಂದು ಕೊಟ್ಟನು. ಅದರಲ್ಲಿ "ಮಾಯಾ ಮಚ್ಛೀಂದ್ರ'' ಮಾತಾಡುವ ಚಲಚಿತ್ರ, ಅಪೂರ್ವ ಸಂದರ್ಭ ಮಂಗಳೂರಿನ ಪೌರಾಣಿಕ ಕಥೆ,'' ಎಂದು ಮುಂತಾಗಿ ಬರೆದಿದ್ದಿತು. ಅದನ್ನು ಕಂಡು ನನ್ನ ಹೆಂಡತಿಯು ಹಿರಿ ಹಿಗ್ಗಿದಳು; ಅಲ್ಲದೆ ಕೂಡಲೇ ಹೋಗಿ ಸೀಟ್ ರಿಸರ್ವ್ ಮಾಡಿಸಬೇಕೆಂದೂ ಇಲ್ಲವೆ ಸ್ಥಳ ಸಂಕೋಚವಾಗಬಹುದೆಂದೂ ಹೇಳಿದಳು. ಹೆಂಡತಿಯ ಮಾತನ್ನು ಮೀರದ ನಾನು ಅದಕ್ಕೊಪ್ಪಿ ಸೀಟ್ ರಿಸರ್ವ್ ಮಾಡಿ ಬಂದೆನು.

ಪ್ರದರ್ಶನವು ಪ್ರಾರಂಭವಾಗುವ ಒಂದು ತಾಸಿನ ಮೊದಲೆ ನಾವೆಲ್ಲರೂ ಸಿನೆಮಾ ಮಂದಿರವನ್ನು ಸೇರಿದೆವು. ಜನಸಮುದಾಯವು ಕಿಕ್ಕಿರಿದಿದ್ದಿತು.

ಕಟ್ಟ ಕಡೆಗೆ ಪ್ರದರ್ಶನವನ್ನು ಪ್ರಾರಂಭಿಸಿದರು. ಕೋಮಿಕ್‌ನ ಅಂಶಕ್ಕಾಗಿ ಭೂತ ಪ್ರೇತಗಳು ಇರುವ ಒಂದು ದೃಶ್ಯವನ್ನು ತೋರಿಸಿದರು. ಆ ನೋಟವು ನನಗೂ ನನ್ನ ಹೆಂಡತಿಗೂ ಬಹಳ ಭೀಕರವಾಗಿ ಕಂಡು ಬಂದಿತು. ಸ್ವಲ್ಪ ಹೊತ್ತಿನ ಮೇಲೆ ಕಥಾ ಭಾಗವು ಪ್ರಾರಂಭವಾಯಿತು. ನಟನೆಗಳು ಬಹಳ ಚೆನ್ನಾಗಿದ್ದುವು. ನನ್ನ ಹೆಂಡತಿಯ ಸಂತೋಷಕ್ಕೆ ಪಾರವೇ ಇರಲಿಲ್ಲ...... ಪರದೆಯಲ್ಲಿ "ಗುಡ್ ನ್ಯಾಟ್'' ಬಂದು ನಿಂತಿತು. ನನ್ನ ಪತ್ನಿಯ ಬಯಕೆಯು ತೀರಿದಂತಾಯಿತು. ಸಿನೆಮಾ ಮಂದಿರದಲ್ಲಿ ನನಗೆ ಕಾಣ ಸಿಕ್ಕಿದ ಮಾವ, ಅತ್ತೆ, ಭಾವ, ಭಾವನ ಹೆಂಡತಿ ಮೊದಲಾದವರೊಡನೆ ನಾವು ಸಿನೆಮಾ ಮಂದಿರದಿಂದ ಹೊರಟು ಹೊಟೆಲ್ ಡಿ ಮಿನೆರ್ವಕ್ಕೆ ಬಂದೆವು. ಆದರೆ ನನ್ನ ಪತ್ನಿಯು ಅಲ್ಪ ಸ್ವಲ್ಪ ಅಸ್ವಸ್ಥ ಚಿಹ್ನೆಯನ್ನು ತೋರಿಸಿದ್ದರಿಂದ ಉಪಾಯವಿಲ್ಲದೆ ಆ ಟೇಕ್ಸಿಯೊಂದನ್ನು ಬಾಡಿಗೆಗೆ ಗೊತ್ತು ಹಚ್ಚಿ ನಾವೆಲ್ಲರೂ ಕೂಡಲೇ ನಮ್ಮ ಮನೆಗೆ ಪ್ರಯಾಣ ಮಾಡಿದೆವು.....

ರಾತ್ರಿ ಬಹಳವಾಗಿತ್ತು. ನೆಂಟರೆಲ್ಲರಿಗೂ ವಿಶ್ರಾಂತಿಗಾಗಿ ತಕ್ಕ ಏರ್ಪಾಡನ್ನು ಮಾಡಿ ಕೊಟ್ಟು ನಾನೂ ನನ್ನ ಪ್ರೇಯಸಿಯೂ ನಿದ್ರಿಸ ಹೋದೆವು. ನನ್ನವಳು ಎಂದಿನಂತೆ ಒಂದು ಬೆಳ್ಳಿಯ ಉರುಟಾದ ಪಾತ್ರದಲ್ಲಿ ಹಾಲನ್ನೂ ಒಂದು ಲೋಟವನ್ನೂ ನಮ್ಮ ಮಂಚದ

ಬಳಿಯಲ್ಲಿರುವ ಮೇಜಿನ ಮೇಲಿರಿಸಿ ನಿದ್ರೆಗಣ್ಣಿನ್ನೊರಸಿ ನಿದ್ರಿಸಿದಳು. ಪಿಟ್ಟೆಂದು ಮಾತನಾಡಲಿಲ್ಲ–ಅವಳ ತಲೆಯು ಲ್ಲೇನಿತ್ತೊ! ನನಗೂ ನಿದ್ದೆಯು ಜೋರಾಗಿ ಹತ್ತಿದ್ದರಿಂದ ನನ್ನ ಶಾಲು ಗೀಲುಗಳನ್ನು ಮೇಜಿನ ಮೇಲಿಟ್ಟು ನನ್ನವ ಳನ್ನೇ ಅನುಸರಿಸಿದೆನು.

ನಾವಿಬ್ಬರೂ ಗಾಢ ನಿದ್ರೆಯಲ್ಲಿದ್ದೆವು. ನನಗೆ ನಾನಾ ತರದ ದುಃಸ್ವಪ್ನಗಳು ಬೀಳ ತೊಡಗಿದವು. ನನಗೆ ನಿದ್ರೆಯಲ್ಲಿಯೂ ಭಯ ಉಂಟಾಗುತ್ತಿತ್ತು. ಆದರೆ ಇದೇನು? ನನ್ನ ಪತ್ನಿಯು ನನ್ನನ್ನು ಬಲವಾಗಿ ಅಪ್ಪಿಕೊಂಡು ಚಿಟ್ಟೆಂದು ಚೀರಿದಳು! ಈ ಆಕಸ್ಮಿತ ಸಂಘಟನೆಯಿಂದ ಏನೊಂದೂ ತೋಚದೆ ಅವಳನ್ನು ಮತ್ತಷ್ಟು ಬಲವಾಗಿ ಹಿಡಿದು ಕೊಂಡು ನಾನೂ ಚೀರಿ ಬೊಬ್ಬಿಟ್ಟೆನು. ಆದರೂ ಧೈರ್ಯವನ್ನು ತಂದುಕೊಂಡು ಹಾಸಿಗೆಯ ಮೇಲಿದ್ದ ವಿದ್ಯುಚ್ಛಕ್ತಿಯ ದೀಪದ ಗುಂಡಿಯನ್ನು ಅಮುಕಿದೆನು, ಬೆಳಕು ಜಗ್ಗೆಂದಿತು.

ಏನದು!! ನನ್ನ ಮೈ ಜುಮ್ಮೆಂದಿತು! ಭಯಂಕರ! ಭಯಾನಕ! ಬೆಳ್ಳಿಯೋಪಾದಿಯಲ್ಲಿ ಮಿಂಚುವ ತಲೆಯುಳ್ಳ ಕುರುಡಾಕೃತಿಯೊಂದು ನನ್ನ ಶಾಲನ್ನು ಹೊದೆದುಕೊಂಡು ವಿಕಾರ ಧ್ವನಿಯಿಂದ ಕೂಗುತ್ತಾ ಥಕ್ಕ ಭಕ್ಕನೆ ಹಾರಾಡು ತ್ತಿದ್ದಿತು. ಸಾಕ್ಷಾತ್ ಯಮಸ್ವರೂಪದ ಆ ರುಂಡವಿಲ್ಲದ ಮುಂಡ ಭೂತದ ಭೀಕರ ರೂಪವೇ ವಿಕಾರ! ವಿಕಾರ! ಈ ಉತ್ಪಾತವನ್ನು ಕಂಡು ನನ್ನ ಕೈಯಲ್ಲಿದ್ದ ಆ ವಿದ್ಯುದ್ದೀ ಪವು ತಾನಾಗಿಯೇ ಕೈಯಿಂದ ಉದುರಿ ಬಿದ್ದು ಚೂರು ಚೂರಾಯಿತು!......ಒಡನೆ ಕಗ್ಗತ್ತಲೆ! ಗಾಢಾಂಧಕಾರ! ಬಾಲ್ಯದಲ್ಲಿ "ಅಗೋ ಬಂತು! ಇಗೋ ಬಂತು! ಭೂತ! ಪ್ರೇತ! ಗುಮ್ಮ!" ಎಂದು ಹೆದರಿಸಿದ ನನ್ನ ಮಾತೆಯ ಮಾತುಗಳು ಜಗ್ಗನೆ ನನ್ನ ಮನಸ್ಸಿನಲ್ಲಿ ಹೊಳೆದು ನನಗೆ ರೋಮಾಂಚನವನ್ನುಂಟು ಮಾಡಿದುವು. ಆ ಕುಣಿದಾಡುವ ರೂಪವಿಲ್ಲದ ಆಕಾರವು ಹೃದಯ ಭೇದಕವಾದ ಧ್ವನಿಯಿಂದ ಕೂಗುತ್ತಾ, ಬೆದರಿಸುತ್ತಾ, ದಡ ಬಡನೆ ಹಾರುತ್ತಾ ನೆಗೆದು ನಮ್ಮ ಮೈ ಮೇಲಕ್ಕೆ ಬಿದ್ದಿತು. ಉಳಿಗಾಲವಿಲ್ಲೆಂದು ಖಚಿತ ಮಾಡಿದ ನಾವಿಬ್ಬರೂ ಬಿಗಿದಪ್ಪಿಕೊಂಡು ಪುನಹ ಚೀರಿದೆವು. ನಮಗಾಗ ಸ್ಮೃತಿ ತಪ್ಪುವಂತಾಗಲು ಒಬ್ಬರ ಮೇಲೊಬ್ಬರು ದೊಪ್ಪನೆ ತಬ್ಬಿಬ್ಬಾಗಿ ಬಿದ್ದು ಬಿಟ್ಟೆವು......

ನನಗೆ ಸ್ಮೃತಿ ತಪ್ಪಿದರೂ ಹೊರಗಾಗುವ ಶಬ್ದಗಳು ಸ್ವಲ್ಪ ಸ್ವಲ್ಪವಾಗಿ ಕೇಳಬರುತ್ತಿದ್ದವು. ನಮ್ಮ ಕೋಣೆಯ ಕದವನ್ನು ಬಡಿದಂತಾಯಿತು. ಹತ್ತಾರು ಜನರು ಬಹಳ ಗಡಿಬಿಡಿಯಿಂದಲೂ ಗೊಂದಲದಿಂದಲೂ ದೀಪಗಳನ್ನು ಕೈಯಲ್ಲಿ ಹಿಡಿದುಕೊಂಡು ಬಾಗಿಲೊಡೆದು ಒಳಗೆ ಬಂದಂತಾ ಯಿತು. ಪರ ಕ್ಷಣದಲ್ಲಿಯೇ ನನ್ನ ಭಾವನ ಹ್ಹ! ಹ್ಹ! ಹ್ಹೊ! ಹ್ಹೊ! ಹ್ಹಿ ಹ್ಹಿ ಹ್ಹೀ......ಎಂಬ ಅಹ್ಲಾದಕರ ನಗುವು ನನ್ನ ಕಿವಿಗೆ ಕೇಳ ಬರಲು, ಇಂತಹ ವಿಪರೀತ ಸಮಯದಲ್ಲಿಯೂ ತಮಾಷೆ ಏನಿದೆಂದು, ಧೈರ್ಯ ದಿಂದ ಕಣ್ಣುಗಳನ್ನು ಬಲವಂತದಿಂದ ಬಿಡಿಸಿಕೊಂಡು ಎದ್ದು ನಿಂತೆನು. ನೋಡುವುದೇನು?—ಚೀ! ಚೀ! ಎಂತಹ ಕ್ಷುಲ್ಲಕ, ಅಲ್ಪ ಕನಿಷ್ಟ ಸಂಗತಿಯನ್ನು ಅಧಿಕ ವಾಗಿಟ್ಟುಕೊಂಡು ನಾನೂ ನನ್ನ ಪತ್ನಿಯೂ ಬೆದರಿದೆವು!

ಮೇಜಿನ ಮೇಲೆ ಬೆಳ್ಳಿಯ ಪಾತ್ರದಲ್ಲಿ ನನ್ನ ಹೆಂಡ ತಿಯು ಇಟ್ಟಿದ್ದ ಹಾಲನ್ನು ನಾನು ನಿದ್ರಾಭರದಿಂದ ಕುಡಿ ಯಲು ಮರೆತ್ತಿದ್ದೆನು. ಸದ್ದಿಲ್ಲದೆ ಬಂದಿದ್ದ ಒಂದು ಮುದಿ ಬೆಕ್ಕು ತಲೆ ಹಾಕಿ ಹಾಲೆಲ್ಲವನ್ನೂ ಕುಡಿದು 'ಅತಿಯಾಸೆ ಗತಿಕೇಡು' ಎಂಬಂತೆ ಪಾತ್ರದಡಿಯಲ್ಲಿ ಉಳಿದಿದ್ದ ಕೆನೆ ಯನ್ನು ತೆಗೆಯುವುದಕ್ಕಾಗಿ ತಲೆಯಿದ್ದಂತೆಯೇ ಒಂದು ಕೈಯನ್ನೂ ಒಳಗೆ ನುಗ್ಗಿಸಿತು. ಹಾಲಿನ ಪಶೆ ಇದ್ದದರಿಂದ ಕೈ ತಲೆಗಳು ಒಳಗೆ ಹೋದಷ್ಟು ಚುರುಕಾಗಿ ಹೊರಗೆ ಬರ ಲಿಲ್ಲ. ತಲೆಯನ್ನು ಎಳೆಯಿತು. ಕೈಯನ್ನು ಎಳೆಯಿತು; ಬರಲಿಲ್ಲ. ಹಾರಿತು, ಬರಲಿಲ್ಲ. ಹಗುರವಾದ ಬೆಳ್ಳಿಯ ಪಾತ್ರವು ಕತ್ತಿನ ವರೆಗೂ ತಲೆಗೆ ಕೂಡಿದಂತಾಗಲು ಮೇಜಿನ ಮೇಲಿದ್ದ ನನ್ನ ಶಾಲು, ಹೊರಳಾಡಿಕೆಯಿಂದ ಹೊದಿಸಿ ದಂತಾಗಿ ಹಾರಿ ನಮ್ಮ ಹಾಸಿಗೆಯ ಮೇಲೆ ಬಿದ್ದು, ಕಂಡ ಕಂಡ ಕಡೆಗೆ ನೆಗೆಯಲಿಕ್ಕೂ ಹಾರಲಿಕ್ಕೂ ಪ್ರಾರಂಭಿಸಿತು. ಬೆಕ್ಕಿನಾಟವೇ ಆ ದಿನದ ಚಮತ್ಕಾರ. ಉಪಚಾರದಿಂದ ಸ್ಮೃತಿ ಹೊಂದಿದ ನನ್ನ ಪತ್ನಿಯು ನಕ್ಕಳು. ನಾನೂ ನಕ್ಕೆನು. ಎಲ್ಲರೂ ಗಹ ಗಹಿಸಿ ನಕ್ಕರು.

ಎಲ್ಲವೂ ಶಾಂತವಾದ ಮೇಲೆ ಏಕಾಂತದಲ್ಲಿ ನನ್ನ ವಳು "ಬಹಳ ಧೈರ್ಯವಂತರಿರುವಿರಿ ನೀವು, ನಿಮ್ಮ ಮಗನು ನಿಮ್ಮಿಂದಲೂ ಶತಪಾಲಿನವನಾಗುವನೋ ಏನೋ" ಎಂದು ವಿನೋದವಾಗಿ ಹೇಳಿದಳು. ನನ್ನ ಉತ್ತರವಾದರೂ "ಯಥಾ ಪಿತಃ ತಥಾ ಸುತಃ" ಎಂದೇ......

+ ++ +

# ಲಲಿತೆ.

ಲೇಖಕರು:—ಶ್ರೀ. ಕಂದಕ ಈಶ್ವರ.

ಮಂಗಳೂರು, ತಾ. 1-1-'33

ಮ। ರಾ। ರಾ। ಗೋವಿಂದ ರಾಯರಿಗೆ—

"ಮಹಾಶಯರೇ,

ತಾವು ಸಿರಿವಂತರಿರುವಿರಿ. ಸಿರಿತನವು ಸ್ಥಿರವಲ್ಲ. ಬಡವರ ಸೇವೆಯನ್ನು ಮಾಡಲೋಸುಗವೇ ತಮಗೆ ದೇವರು ಧನವನ್ನು ಕೊಟ್ಟಿರುವನು. ಬಡವರು ಬಡ ಬದುಕಿಗಾಗಿ ಜೀವನಕ್ಕಾಗಿ ತಮ್ಮಲ್ಲಿ ಗೇಯುವರು. ಅವರಿಗೂ ಮಕ್ಕಳು ಮರಿಗಳಿರುವರು. ಅವರನ್ನು ತಾವು ಕೂಗಿಸುವುದು ಸರಿಯಲ್ಲ. ಬಡವರ ಬಡ ಬಾಳಿನ ಹಾಳು ಕೋಳನ್ನು ಕಡಿಮೆ ಮಾಡಿರಿ- ತಾವು ಇನ್ನೆರಡು ದಿನಗಳೊಳಗಾಗಿಯೇ ತಮ್ಮ ಬಡ ಕೂಲಿಯಾಳುಗಳ ಗೋಳನ್ನು ಕಡಿಮೆ ಮಾಡದೆ ಇದ್ದರೆ—ತಿಳಿದಿರಿ! ಜಾಗ್ರತೆ!! ಜೋಕೆ!!! ತಮ್ಮ ಹಣವನ್ನು ನಾನು ಬಡವರ ಬಗ್ಗಾಗಿ ಕದಿಯದೆ ಇರೆನು. ಕದ್ದೇ ಕದಿಯುವೆನು!!!"

ಇಂತಿ,

?

ಮೇಲಿನ ಪತ್ರವು ರಾಯರ ಕೋಣೆಯ ಬಾಗಿಲ ಸಂದಿನಲ್ಲಿ ಸಿಕ್ಕಿಸಲ್ಪಟ್ಟಿತ್ತು. ರಾಯರು ರಾಯರೇ ಆಗಿದ್ದರು. ಗೋವಿಂದ ರಾಯರೆಂಬುದು ಅವರ ಹೆಸರು. ಆದರೂ ರಾಯರೆಂದರೆ ಎಲ್ಲರಿಗೂ ಗೊತ್ತು. ಅವರೊಬ್ಬ 'ಕಾರ್ಬಾರಿ' ಮನುಷ್ಯ. ಅಲ್ಲಿ-ಇಲ್ಲಿ-ಎಲ್ಲೆಲ್ಲೂ ಎಲ್ಲರಿಗೂ ಅವರ ಹೆಸರು ಗೊತ್ತಿತ್ತು, ಕಾರ್ಬಾರು ತಿಳಿದಿತ್ತು. ಅಂದರೆ ಒಳಗಿನ ಕೊಳಕಲ್ಲ, ಹೊರಗಿನ ಥಳಕು. "ಮೊನ್ನೆ ಮೈದಾನಿನ ಸಭೆಯಲ್ಲಿ ರಾಯರು ಅಧ್ಯಕ್ಷರು. ಇಂದಿನ ಸಭೆಯಲ್ಲಿ ಅವರೇ ಮುಂದಾಳುಗಳು "—" ನಾಡದು ಮಂಗಳೂರಿಗೆ ಗಾಂಧೀಜಿಯವರು ಬರುವಾಗ ರೂ. ೧೦೦೦ನ್ನು ಗಾಂಧೀಜಿಯವರಿಗೆ ಕೊಡಲಿರುವರಂತೆ (?)" ಎಂದು ಮುಂತಾದ ರಾಯರ ವಿಷಯಕ ಸುದ್ದಿಯು ಜನರಲ್ಲಿ ಹರಡುವುದಿತ್ತು. ಹಳ್ಳಿಗಳಲ್ಲಂತೂ ರಾಯರ ಸುದ್ದಿಯೆಂಬುದು ಗಾಂಧೀಜಿಯವರ ಸುದ್ದಿಯಂತೆ—ಅಲ್ಲಲ್ಲ. ಗಾಂಧೀಜಿಯವರ ಸುದ್ದಿಯಾದರೂ ಜನರಿಗೆ ಗೊತ್ತಿಲ್ಲದೆಯೂ ಇರಬಹುದು. ಆದರೆ ರಾಯರ ಸುದ್ದಿಯು ಎಲ್ಲರಿಗೂ ಗೊತ್ತೇ ಇತ್ತು. ಒಂದೇ ಮಾತಿನಿಂದೆನ್ನುವುದಾದರೆ ಎಲ್ಲೆಲ್ಲೂ ರಾಯರು—(ರಾಕ್ಷಸರಲ್ಲ)—ರಾಜರೇ ಆಗಿದ್ದರು.

ರಾಯರು ಕೋಣೆಯನ್ನು ತೆರೆಯ ಬರುವಾಗಲೇ ಪತ್ರವನ್ನು ನೋಡಿದರು. ಅವರಿಗೆ ಆಶ್ಚರ್ಯವಾಯಿತು. ಕೋಣೆಯನ್ನು ತೆರೆದರು. ಅತ್ತಿತ್ತ ನೋಡಿದರು; ಯಾರೂ ಇಲ್ಲವೆಂದು ತಿಳಿದಾದ ಮೇಲೆ ಕೋಣೆಯ ಒಳ ಹೊಕ್ಕು ಪತ್ರವನ್ನು ಓದಿದರು. ಒಂದಲ್ಲ, ಹಲವು ಬಾರಿ ಓದಿದರು. ಓದಿದಂತೆಲ್ಲಾ ಅವರ ಮನಸ್ಸಿಗೆ ಮುಳ್ಳು ಚುಚ್ಚಿದಂತೆಯೂ ಆಯಿತು. ಆಶ್ಚರ್ಯವೂ ಆಯಿತು. ಯೋಚನೆಗೂ ಮೊದಲಾಯಿತು. ಏನು ಮಾಡಬೇಕೆನ್ನುವ—ಮಾಡುತ್ತಿರುವರೆಂಬುವ ಬಗೆಯು ಅವರ ಮನಸ್ಸಿಗೆ ತೋಚದೆ ಹೋಯಿತು. ಎದ್ದು ಕುಳಿತು, ಕುಳಿತು ಎದ್ದು, ಅತ್ತಿತ್ತ ತಿರುಗಿ ತಿರುಗಿ, ತಲೆ ಕರೆದು ಕರೆದೂ ರಾಯರಿಗೆ ಸಾಕಾಗದೆ ಹೋಯಿತು. ಯಾವ ಬಗೆಯ ಅರ್ಥವೂ ಅವರಿಗೆ ತಿಳಿಯದಾಯಿತೆಂದಾದ ಮೇಲೆ, ಕೋಣೆಯ ಹೊರ ಬಂದು 'ಅಮ್ಮಾ' ಎಂದು ಕರೆದರು.

ನಸು ನಗೆ ನಗುತ್ತಾ 'ಓ' ಎಂದು ಕನ್ಯೆಯೊಬ್ಬಳು ಓಡಿ ಬಂದಳು. ಕನ್ಯೆಯು ರಾಯರ ಮಗಳು. ಒಬ್ಬಳೇ ಮಗಳವಳು. ಸುಂದರಿ—ಅವರ್ಣನೀಯ ಸುರೂಪಿಣಿ. 'ಲಲಿತಾ' ಎಂದವಳ ಹಸರು. ಆದರೂ, ರಾಯರು ಮುದ್ದಿನಿಂದ 'ಅಮ್ಮಾ' ಎಂದೇ ಕರೆಯುತ್ತಿದ್ದರು. ಲಲಿತೆಯು ರಾಯರ ಮಗಳು. ರಾಯರು ರಾಯರೇ! ಮಗಳು ಮಗಳೇ!

ರಾಯರು ಧನಿಕರು. ಅವರಿಗೆ ಟೆಕ್ಸ್‌ಟೈಲ್ ಎಂಡ್ ಕೊ. ಎಂಬ ವಸ್ತ್ರದ ಕಂಪೆನಿ ಇತ್ತು. ಪ್ರಸಿದ್ಧ ಹಂಚಿನ ಕಾರ್ಖಾನೆಯೊಂದಿತ್ತು. ಅಕ್ಕಿ ಮುಡಿಯ ಭಂಡಸಾಲೆಯಿತ್ತು. ಅವುಗಳೆಲ್ಲದರಲ್ಲೂ ಬಡವರು ಗೇಯುತ್ತಿದ್ದರು. ಆದರೆ ಬಡವರಿಗೆ ಸುಖವಿಲ್ಲ! ರಾಯರು ಬಡವರನ್ನು ಕೂಗಿಸದ ದಿನವಿಲ್ಲ! ಬಡವರು ಬಡ ಬದುಕಿಗಾಗಿ ಸಂಬಳವನ್ನು ಕೇಳಿದರೆ—'ಇಂದಿಲ್ಲ. ನಾಳೆ' ಎನ್ನುವರು. ನಾಳೆ ಕೇಳಿದರೆ 'ನಾಡದು' ಎನ್ನುವರು. "ಇಂದು ಬೇಂಕಿಗೆ ರಜೆ. ನಾಳೆ ಕಾಸಿಗೆ ರಜೆ" ಹೀಗೆನ್ನುವರೇ ಹೊರತು, ಬಡವರಿಗೆ ಕೊಡುವ ಕ್ರಮವಿಲ್ಲ. ಕೊಟ್ಟರೂ ಬಡವರ ಅಲ್ಪಸ್ವಲ್ಪ ಸಂಬಳದಿಂದ ಕಡಿಯದೆ ಇಲ್ಲ. 'ರಾಯರು ಇಂತಹರೇ?' ಎಂದು ಕೇಳುವಿರಾದರೆ, ರಾಯರು ಇಂತಹರೇ ಆಗಿರಲಿಲ್ಲ. ತನ್ನ

ಮನೆ—ತನ್ನ ಹೆಂಡತಿ—ತನ್ನ ಮಗಳು ಎಂದರೆ ರಾಯರ ಪ್ರಾಣ. ತಿನ್ನುವುದರಲ್ಲಿ ಅವರು ಭೀಮ. ಮಗಳನ್ನವರು ಬಹಳವಾಗಿ ಪ್ರೀತಿಸುತ್ತಿದ್ದರು. ಮಗಳಿಗೂ ತಂದೆಯ ಮೇಲೆ ಪ್ರೇಮವಿಲ್ಲದೆ ಇಲ್ಲ. ಆದರೆ ತಂದೆಯ ಹಲವು ಗುಣಗಳು ಮಗಳಿಗೆ ಸರಿಹೋಗುತ್ತಿರಲಿಲ್ಲ. ಮಗಳು ಬಡವರ ಬಂಧು ವಾಗಿದ್ದಳು. ತನ್ನ ತಂದೆಯ ಕೂಲಿಯಾಳುಗಳಿಗೆ ಗುಟ್ಟಾಗಿ ಅವಳು ತನ್ನಿಂದಾದಷ್ಟು ಸಹಾಯವನ್ನು ಮಾಡುತ್ತಿದ್ದಳು. ಕೂಲಿಯಾಳುಗಳು ಅವಳನ್ನು ಬಹಳವಾಗಿ ಪ್ರೀತಿಸುತ್ತಿದ್ದಳು, ಗೌರವಿಸುತ್ತಿದ್ದರು. ತಮ್ಮ ಸಣ್ಣಾಹಿನಿಯ ಮೇಲಿದ್ದ ಅದೊಂದು ದಾಕ್ಷಿಣ್ಯದಿಂದಾಗಿಯೇ ಅವರು ತಮ್ಮ ಧನಿಯ ಮೇಲೆ ಮುಷ್ಕರವನ್ನು ಮಾಡದಿದ್ದರು.

ಲಲಿತೆಯು ಬಂದವಳೇ "ಏಕೆ ಕರೆದಿರಿ, ಅಪ್ಪಾ?" ಎಂದು ಕೇಳಿದಳು. ರಾಯರು ಆ ನಿಗೂಢ ಪತ್ರವನ್ನವಳ ಕೈಯಲ್ಲಿ ಕೊಟ್ಟು, 'ಲಲಿತಾ! ಇದನ್ನೊಮ್ಮೆ ಓದು ನೋಡುವಾ' ಎಂದರು. ಇಬ್ಬರೂ ಕೋಣೆಯೊಳಗೆ ಹೋದರು.

\+ \+ \+ \+

ಇಂದು ರಾಯರು ರಾಯರೇ ಆಗಿದ್ದರು. ತಡೆಯ ಲಾರದ ಆಶ್ಚರ್ಯ! ಕಳವು! ಕಳವು!! ಅವರ ಹತ್ತು ಸಾವಿರ ರೂಪಾಯಿಗಳೇ ಕಳವಾಗಿದ್ದುವು. ಭದ್ರವಾದ ಕಬ್ಬಿಣದ ಪೆಟ್ಟಿಗೆಯೊಳಗಿನಿಂದ! ಅದರಿಂದಲೇ ಹಣವು ಸೂರೆಯಾ ಗಿತ್ತು. ಜಾರಿಸಿದವರಾರೆಂದು ರಾಯರಿಗೆ ತಿಳಿದಿಲ್ಲ! ಬಹುಶಃ ಆ ಪತ್ರ ಬರೆದ ಆಸಾಮಿಯೇ ಆಗಿರಬೇಕೆಂದು ರಾಯರ ಭಾವನೆ. ಆದರೆ ಆ ಆಸಾಮಿಯಾರು? ಅವನು ಹೇಗೆ ಕದ್ದನು? ಕೀಲಿಯ ಗೊಂಚಲು ತನ್ನ ಸೊಂಟದಲ್ಲೇ ಇರುವಾಗ—ಹಾಗಿರುವಾಗ—ಆಶ್ಚರ್ಯ! ತಾನು ಜಾಗ್ರತೆ ಯಲ್ಲಿದ್ದೂ ಕಳ್ಳನು ಕದ್ದನೆಂದರೆ ಅದೀಗ ಮಹದಾ ಶ್ಚರ್ಯ!

ರಾಯರು ಚಿಂತೆಯಿಂದಲೇ ಲಲಿತೆಯನ್ನು ಕರೆದರು. ಈ ಮೊದಲೊಮ್ಮೆ ಅವರು ಪತ್ರವನ್ನವಳಿಗೆ ತೋರಿದ್ದರು. ಈಗಲೂ ಕಾಣೆಯಾದ ಸಂಗತಿಯನ್ನು ಹೇಳಿಕೊಂಡರು. ಪಾಪ—ಲಲಿತೆಗು ಆಶ್ಚರ್ಯವೂ ದುಃಖವೂ ಆಯಿತು. ಆದರೆ ಅವಳೇನು ಮಾಡಿಯಾಳು? ಏನನ್ನು ಹೇಳಿಯಾಳು? ನಿರುತ್ತರ. ಕ್ಷಣ ಕಾಲ ಕಳೆದ ಬಳಿಕ ಪತ್ತೇದಾರನೊಬ್ಬನಿಗೆ ಬರೆಯಲು ಹೇಳಿಕೊಂಡಳು. ರಾಯರು ಒಪ್ಪಿದರು. ಅದೊಂದು ಆಶೆಯಿಂದ ಲಲಿತೆಯು ಹೇಳಿದಲ್ಲಿಗೆ—ಬೆಂಗಳೂ ರಿಗೆ ಪತ್ರವೊಂದನ್ನು ಬರೆದರು.

ಪತ್ತೇದಾರನು ರಾಯರಲ್ಲಿಗೆ ಬಂದನು. ಸುಂದರನಾ ಗಿದ್ದನು. ಅಗಲದೆದೆಯುಬ್ಬು, ನಗು ಮುಖ, ಕಾಂತಿ ಗೂಡಿದ ಕಣ್ಣುಗಳು; ಗಟ್ಟಿಮುಟ್ಟಾದ ದೇಹ, ಇವು ಎಂತಹ ರನ್ನಾದರೂ ಮೆಚ್ಚಿಸುವಂತಹದಿದ್ದುವು. ರಾಯರು ಸಂತೋಷ ದಿಂದ ಅವನನ್ನು ಸ್ವಾಗತೀಕರಿಸಿದರು. ಅತಿಥಿಯುಪಚಾರ ಗಳನ್ನು ಮಾಡಿದರು; ಹೆಸರೇನೆಂದು ಕೇಳಿದರು. ಯುವ ಕನು 'ಆನಂದರಾಯ'ನೆಂದು ಉತ್ತರ ಕೊಟ್ಟನು. ಮಾತು ಕಥೆಗಳಿಗೆ ಮೊದಲಾಗಿ ರಾಯರು ಹೇಳಿದರು. ಅವನು ಕೇಳಿ, ಹೇಳಿದನು. ಕಡೆಯ ಮಾತಿಗೆ ಮಾತ್ರ ಉತ್ತರ ಕೊಡದೆ ಮಗಳಲ್ಲಿಗೆ ಬಂದು ರಾಯರು ಕೇಳಿದರು. ಲಲಿತೆಯು ಒಮ್ಮೆಗೆ ಅಸಮ್ಮತಿ ಸೂಚಿಸಿದ್ದಳಾದರೂ, ತಂದೆಯ ಬಹು ವಿಧದ ಸರಸ ಮಾತುಗಳಿಂದಾಗಿ ಒಪ್ಪಿದಳು. ರಾಯರು ಸಂತೋಷದಿಂದ ನಗುತ್ತಾ ಪತ್ತೇದಾರನಲ್ಲಿಗೆ ಬಂದು "ಅವಶ್ಯವಾಗಿಯೂ!" ಎಂದು ಹೇಳಿದರು.

* * * *

ಪತ್ತೇದಾರ ಆನಂದರಾಯನು ನಿಗೂಢ ಪತ್ರ ಬರೆದವ ನಾರೆಂದು ಕಂಡು ಹಿಡಿದು ಕಳೆದು ಹೋದ ಹಣವನ್ನು ದೊರ ಕಿಸಿಕೊಂಡನು. ಆದರೆ ಕದ್ದವರಾರೆಂದು ಹೇಳಲಿಲ್ಲ! ತನಗೆ ಮದುವೆಯಾದ ಏಳನೇ ದಿನದಲ್ಲಿ ತಿಳಿಸುವೆನೆಂದನು. ರಾಯರು ಒಪ್ಪಿದರು. ಆನಂದರಾಯನು ಗೋವಿಂದ ರಾಯರಿಂದ ಮೊದಲೇ ಕರಾರು ಬರೆಸಿಕೊಂಡಂತೆ, ಕಳೆದು ಹೋದ ಹತ್ತು ಸಾವಿರ ರೂಪಾಯಿಗಳ ಅರ್ಧದಲ್ಲಿ 2 ಸಾವಿರ ರೂಪಾಯಿಯನ್ನು ರಾಯರ ಕೆಲಸದವರಿಗೂ ಕೆಲಸಗಾರರಿಗೂ 3 ಸಾವಿರ ರೂಪಾಯಿಗಳನ್ನು ಬಡ ಭಿಕ್ಷುಕ—ಭಿಕ್ಷುಕಿಯ ರಿಗೂ ಹಂಚಿಸಿದನು.

ಅದೊಂದು ಆದಿತ್ಯವಾರ ದಿನ. ಲಲಿತಾ—ಆನಂದ ರಾಯರ ವಿವಾಹವು ನಡೆಯಿತು. ಮದುವೆಯು ಆದರ್ಶ ವಾಗಿತ್ತು. ವಾದ್ಯ ವಾಲಗವಿದ್ದಿಲ್ಲ. ಇಲ್ಲದ ದುಂದು ವೆಚ್ಚಗಳೇನೂ ಇಲ್ಲದೆ ಮದುವೆಯು ಸುಲಭ ಹಾಗೂ ಸರಳ ರೀತಿಯಿಂದ ಸಾಗಿತ್ತು. ಆ ದಿನ ಬಡವರೆಲ್ಲರಿಗೂ ಧರ್ಮದ ಊಟವಿತ್ತು. (ಈ ರೀತಿಯಲ್ಲಿ ಮದುವೆಯಾಗಬೇಕೆಂದೂ ಆನಂದರಾಯನು ಗೋವಿಂದ ರಾಯನಿಂದ ಮೊದಲೇ ಬರೆಸಿ ಕೊಂಡಿದ್ದನು.)

ಮದುವೆಯು ಐದನೇ ದಿನವೇ ರಾಯರಿಂದ—ರಾಯರ ಎರಡನೆ ಹೆಂಡತಿಯಿಂದ ಆನಂದರಾಯನು ಅಪ್ಪಣೆಯನ್ನು ಪಡೆದು ತನ್ನ ಅರ್ಧಾಂಗಿ ಲಲಿತೆಯನ್ನು ಕರೆದುಕೊಂಡು ಬೆಂಗಳೂರಿಗೆ ಹೋದನು. ಅವರು ಹೋದ ಮೂರನೆಯ ದಿನವೇ ರಾಯರಿಗೆ ಒಂದು ಪತ್ರವು ಬಂತು. ರಾಯರು ಓದಿದರು:—

ಬೆಂಗಳೂರು, ತಾ. ೧-೩-'೩೩.

ಅಪ್ಪಾ!

ತಪ್ಪೋ ಒಪ್ಪೋ ನಾನರಿಯೆ. ನನ್ನ ಕರ್ತವ್ಯವನ್ನಷ್ಟು ಪಾಲಿಸಿರುತ್ತೇನೆ. ತಮಗೆ ನನ್ನ ಮೇಲೆ ಪ್ರೇಮವಿದೆ ನಿಜ. ಆ ಪ್ರೇಮದಿಂದಾಗಿಯೇ ತಾವು ನನ್ನನ್ನು ಬಾಲ್ಯದಲ್ಲಿಯೇ ತಾಯಿಯು ಸತ್ತಿದ್ದರೂ, ಪ್ರೀತಿಯಿಂದ ಸಾಕಿದ್ದೀರಿ. ನನಗೆ ಸುಖವಾಗಲೆಂದು ಹೆಚ್ಚು ವರದಕ್ಷಿಣೆ ಕೊಟ್ಟು ಸಿರಿವಂತರ ಯುವಕನನ್ನು ಕೊಡುವ ಆಲೋಚನೆಯನ್ನು ಮಾಡಿದ್ದಿರಿ. ಆದರೆ ನಾನೊಪ್ಪಲಿಲ್ಲ. ಏಕೆನ್ನುವಿರಾ? ತಾವು ಸಿರಿವಂತರು, ಹೆಚ್ಚು ವರದಕ್ಷಿಣೆ ಕೊಡಲು ಶಕ್ತರು. ಆದರೆ ತಮ್ಮ ಅನುಕರಣೆಯನ್ನು ಬಡವರೂ ಮಾಡಲಾರರೇ? ಬಡವರು ಆಗ ಏನಾಗಬೇಕು? ನಾನೊಬ್ಬ ಬಡವನನ್ನು ಪ್ರೀತಿಸುತ್ತಿದ್ದೆನು. ತಮಗೆ ತಿಳಿದಿರಬಹುದು. ತಮ್ಮಲ್ಲಿಯೇ ಕೆಲಸಕ್ಕಿರುವ ಬಡ ವೆಂಕಟರಾಯರ ಮಗ ಕೇಶವರಾಯರನ್ನು! ಆದರೆ, ತಾವು ಒಪ್ಪಲಿಲ್ಲ. ಅವರಲ್ಲಿ ಗುಣವಿತ್ತು. ರೂಪವಿತ್ತು. ಸರಳತನವಿತ್ತು. ಹಣವಿಲ್ಲದ ಬಡವರವರೆಂದು ಒಪ್ಪಲಿಲ್ಲ. ಅವರನ್ನು ಊರಿಂದ ಓಡಿಸಿದಿರಿ. ಆದರೂ ತಾವೆನಗೆ ಪತಿಯಾರಿಸಿ ಕೊಟ್ಟ ಮಹಾಶಯರಾರೆಂದು ತಿಳಿದಿರುವಿರೇ?—ಅವರೇ ಅವರು. ತಮ್ಮಲ್ಲಿ ಹೇಳಿಸಿಕೊಂಡ ಪತ್ತೇದಾರ ಆನಂದರಾಯರೆಂದರೆ ಅದೇ ಕೇಶವರಾಯರೇ! ಅವರೇ ನನ್ನ ಇಂದಿನ ಪತಿಗಳು. ತಮಗೆ ಆಶ್ಚರ್ಯವಾಗಬಹುದು. ಅಪಮಾನವನ್ನು ಮಾಡಿದೆನೆಂಬ ಕೋಪವೂ ಬರಬಹುದು. ಆದರೆ ಬಡತನವು ಅವಮಾನದ ಕಾರಣವಲ್ಲ. ಕ್ಷುದ್ರತೆಯ ಆವರಣವಲ್ಲ. ಅದು ಭಗವಂತನ ಪ್ರಸಾದ. ಕರುಣೆಯ ಎಸಳು. ತಾವು ನನ್ನ ಮೇಲೆ ಪ್ರೀತಿ ಇಟ್ಟಿದ್ದೀರಿ! ನನ್ನ ಮಗಳೆಂಬ ಭಾವ ಇಟ್ಟಿದ್ದೀರಿ. ಆದರೆ, ಅದೇ ಭಾವವನ್ನು ಬಡ ಕೂಲಿಯಾಳುಗಳ ಮೇಲೆ ಇಡದಿದ್ದೀರಿ. ಅದನ್ನು ಕಂಡೇ ನಾನು ಕಳ್ಳ ಪತ್ರವನ್ನು ಬರೆದೆನು. ತಮ್ಮ ದೃಷ್ಟಿಯು ಬಡವರ ದಣಿದಾಟದ ಕಡೆ ಹರಿಯಲಿಲ್ಲ. ಸಮಯ ಸಾಧಿಸಿ ತಮ್ಮ ಸೊಂಟದಲ್ಲಿದ್ದ ಬೀಗದ ಕೈಯನ್ನು ಜಾರಿಸಿದೆನು. ಹಣದ ಗಂಟನ್ನು ತೆಗೆದೆನು. ತಮಗೆ ಆಶ್ಚರ್ಯವಾಗಬಹುದು—ದೇಹವು ಉರಿಯಬಹುದು. ತನ್ನ ಮಗಳೇ ತನಗೆ ಹೀಗೆ ಮಾಡಿದಳಲ್ಲಾ ಎಂಬ ಯೋಚನಾತರಂಗವು ತಮ್ಮನ್ನು ತತ್ತರಿಸಬಹುದು. ಆದರೆ, ನಾನದಕ್ಕೆ ಕಾರಣಳಲ್ಲ. ಹಣ ಕೂಡಿಸಲು ಕೂಲಿಯಾಳುಗಳಿಂದಲೇ ವಂತಿಗೆಯನ್ನು ಮಾಡುತ್ತಿದ್ದೀರಿ. ಸಲ್ಲದ ದಂಡವನ್ನು ವಿಧಿಸುತ್ತಿದ್ದೀರಿ. ಅದು ಸರಿಯೇ? ಅಪ್ಪಾ! ಯೋಚಿಸಿರಿ. ತಾವು ಇನ್ನು ಬಡವರನ್ನು ಪೀಡಿಸುತ್ತಲೇ ಇದ್ದರೆ ತಮಗೆ, ಹಾಗೂ ನನಗೆ ಅಪವಾದವು ಬರುವುದರಲ್ಲಿ ಏನೇನೂ ಸಂಶಯವಿಲ್ಲ. ನಾನಾದರೋ ಅನ್ಯಾಯಕ್ಕೆ ಹೆದರುವೆನು. ಲೋಕದ ಜೊಳ್ಳು ಕಂಡಕ್ಕೆ ಹೆದರುವುದಿಲ್ಲ. ಸತ್ಯದ ಒಸ್ತಾಟಕ್ಕೆ ಹೆದರುತ್ತೇನೆ. ದೇವರು ಇದ್ದಾನೋ ಇಲ್ಲವೋ ನಾನರಿಯೆ. ಇದ್ದರೂ ಇದ್ದುಕೊಳ್ಳಲಿ. ನನಗದರ ಅಗತ್ಯವಿಲ್ಲ. ನಾನು ಅಂಜುವುದೆಂದರೆ ಆ ಪವಿತ್ರ ಸತ್ಯಕ್ಕೆ! ಸತ್ಯದ ತಿರುಳಿಗೆ! ಸತ್ಯದ ಪ್ರಕಾಶಕ್ಕೆ! ಸತ್ಯವೇ ಬಡತನ. ಸತ್ಯವೇ ಬಡವರು. ಅದುದರಿಂದ ಅಪ್ಪಾ! ಬಡವರನ್ನು ಆಲಿಂಗಿಸಿರಿ. ಬದುಕಿಸಿರಿ. ತಾವು ಪುಣ್ಯ ಕಟ್ಟಿಕೊಳ್ಳಿರಿ. ಇದೇ ನನ್ನ ಪ್ರಾರ್ಥನೆ. ಹೆಚ್ಚು ಬರೆಯಬೇಕೆ? ಎಲ್ಲವರಿಂದಲೂ ಬೇಡುವ ಆಶೀರ್ವಾದಗಳು.

ಇತಿ

ತಮ್ಮಿಂದ ಬೇಡುವ ಆಶೀರ್ವಾದ,

ಲಲಿತಾ.

ವಾಚಕ ಮಹಾಶಯಾ—ಮಗಳ ಪತ್ರವನ್ನು ಓದಿ ರಾಯರ ಮನಸ್ಸು ಹೇಗಾಗಿರಬೇಕು?

—+—+—+—

# ಬಡ ಮುದಿಯ ತಿರುಕ!

(ಲೇ—ಶ್ರೀ ಪಿ. ವಿ. ನಾಗರಾಜ ಶೆಟ್ಟಿ, ಹೊಳೆನರಸೀಪುರ)

ಆರಿವನು ಕೂಗುವವ? ಕಂಬನಿಯ ಸುರಿಸುವನು ।
ದಾರಿಯಲಿ ಬಿದ್ದಿರುವ—ಬೇಡುತಿಹನೇಕೆ? ।
ಆರೊಡನೆ ಬೇಡುವನು?–ಕಾತರಿಸಿ ಕರೆಯುವನು! ।
ಆರಿಲ್ಲವೇ ಇವಗೆ? ಅಯ್ಯಯ್ಯೊ ಪಾಪ! ॥ ೧ ॥

ಬಲವಿಲ್ಲ ನರಳುವನು. ಹೊಟ್ಟೆಗೇ ಕೂಗುವನು. ।
ಗೆಲುವಿಲ್ಲ ಬಿದ್ದಿಹನು ಬಡ ಹೊಟ್ಟೆಗಾಗಿ. ॥
ಜಲವಿಲ್ಲ. ಕೂಳಿಲ್ಲ. ಉಡಲವಗೆ ಉಡುಪಿಲ್ಲ ।
ಮಲಗಿಹನು ದಾರಿಯಲಿ ಕೇಳುವವರಿಲ್ಲ. ॥ ೨ ॥

ಜನರವರು ತಿರುಕನನು ನೋಡಿದರು ನೀಡರೂ ।
ಮನಸವರ ಕರಗಿಲ್ಲ–ಬಡ ಭಿಕ್ಷುಗಾಗಿ ॥
ಧನವಿಲ್ಲ. ಜನವಿಲ್ಲ. ಉಳಿಸುವವರಾರಿಲ್ಲ ।
ಮನಬಿಟ್ಟು ಕರೆಯುವನು ಕಾಪಾಡಿರೆಂದು ॥ ೩ ॥

ಬೇನೆಯಿಂ ನರಳುವನು. [illegible] ।
ಬೇನೆಯಿಂ ಕ[illegible] ತಿರುಕ. ।
ಮಾನವನು ಬಿಟ್ಟಿಹನು. ಅಡಿಗಡಿಗೆ ಬೇಡುವನು ।
ಏನನವ ಮಾಡುವನು ಬಡ ಮುದಿಯ ತಿರುಕ! ॥ ೪ ॥

—+—+—+—

# ಸೇರದಿರುತ್ತಿದ್ದರೆ.........?

ಲೇಖಕರು:—ಶ್ರೀ. ಮಂಗಳೂರು ಜಾರಪ್ಪ.



"ರತ್ನಕ್ಕಾ, ಈ ರೀತಿಯ ಬಡತನವನ್ನು ನೀವು ಹೇಗೆ ಸಹಿಸುತ್ತಿರುವಿರಿ!"

"ಏನು ಮಾಡಲಿ ರಾಧಮ್ಮ? ಬಂದದ್ದನ್ನು ಸಹಿಸಬೇಡವೆ?"

"ನಡೆದುದು ನಡೆಯಿತು—ಆದರೆ ಹುಟ್ಟಿದಾರಭ್ಯ ಸುಖ ಸಂಪತ್ತಿನಲ್ಲಿದ್ದು, ಈಗ ಆಕಸ್ಮಿಕವಾಗಿ ಇಂತಹ ದುರಂತ ದಾರಿದ್ರ್ಯಕ್ಕೆ ಒಳಗಾಗುವುದೆಂದರೆ ಸಹನೆಯು ಎಲ್ಲಿಂದ ಬಂದೀತು? ಆರು ಮಕ್ಕಳನ್ನು ವಿದ್ಯೆ, ಅನ್ನ ಬಟ್ಟೆಗಳನ್ನಿತ್ತು ಹೇಗೆ ಸಲಹುವಿರಿ?"

"ಇನ್ನು ಎರಡು ಕೈ ಬಳೆಗಳಿವೆ-ಅವನ್ನು ಮಾರಿ ಕೂಡಿದಷ್ಟು ದಿನಹರಣೆ ಮಾಡುವೆವು. ಆ ಮೇಲೆ . . . . . ಏನೆನ್ನಲಿ!"

ರತ್ನಮ್ಮಳ ಕಣ್ಣುಗಳು ಕೆಂಪಗಾದುವು—ಕಣ್ಣೀರು ಥರಥರನೆ ಇಳಿದು ಬಿಟ್ಟಿತು! ಎರಡು ತಿಂಗಳುಗಳ ಹಿಂದೆ ಆನಂದೋತ್ಸಾಹಗಳಿಂದ ಪ್ರಪುಲ್ಲಿತವಾಗಿದ್ದ ಅವಳ ವದನವು ಇಂದು ತೀರ ನಿಸ್ತೇಜವಾಗಿದೆ. ಪತಿಯ ಆಕಸ್ಮಾತ್ ಮರಣದ ನೆನಹಿನಿಂದಲೂ, ಮಕ್ಕಳನ್ನು ಮುಂದಕ್ಕೆ ಸಲಹುವ ಬಹುಭಾರದ ಚಿಂತನೆಯಿಂದಲೂ ಅವಳು ಬೆಂದು ಬೆಂಡಾಗಿದ್ದಳು. ಆರು ಮಕ್ಕಳ ಜನನಿಯಾಗಿದ್ದರೂ, ೬೦ ದಿನಗಳ ಹಿಂದೆ ನವತರುಣಿಯಂತೆ ಸುಶೋಭಿತೆಯಾಗಿ ಗ್ರಹವನ್ನು ಬೆಳಗುತ್ತಿದ್ದ ಆ ಗುಣಸಂಪನ್ನೆ ಅಬಲೆಯು ಇಂದು ಕರ್‍ರಗಿನ ಮೋಡತುಂಬಿದ ಗಗನಮಂಡಲದಂತಾಗಿರುವಳು! ಅವಳ ಕಣ್ಣೀರ ಹನಿಯು ರಾಧಮ್ಮನ ಎದೆಯನ್ನು ಬಿರಿಯಿತು-ಮುರಿಯಿತು-ಹರಿಯಿತು. ರಾಧಮ್ಮಳು ದುಃಖವನ್ನು ತಡೆಯುತ್ತ ಮೋರೆಯನ್ನು ಸೆರಗಿನಿಂದ ಒತ್ತಿದಳು.

ರತ್ನಮ್ಮ:—ತಾಯಿ, ನೀನೇಕೆ ದುಃಖಿಸುವೆ? ದೇಶಕ್ಕೆ ಬಂದ ಕಷ್ಟ,-ನಮಗೂ ಬಂತು-ವಿಧಿವಿಲಾಸ. ಭೂಕಂಪವೇನು ನನ್ನ ಪತಿಯನ್ನೇ ಅರಸಿ ಬಂತೇ? ಇಲ್ಲ; ಹದಿನಾರು ಜನರೊಡನೆ ಆಫೀಸಿನಲ್ಲಿ ಅವರನ್ನೂ ಒಯ್ದಿತು. ರಿಲೀಫ್ ಕಮಿಟಿಯವರು ಎಷ್ಟು ಸಹಾಯ ಮಾಡುವರು?" ಪುನಃ ಅವಳು ದೀರ್ಘ ನಿಟ್ಟುಸಿರನ್ನು ಬಿಟ್ಟಳು. ಅನೇಕ ದಿನಗಳಿಂದಲೂ ಅವಳು ಧ್ಯಾನಿಸುವ ಪ್ರಾಣತ್ಯಾಗ ಪಿಶಾಚಿಯು ಅವಳನ್ನು ಒಳಗಿಂದೊಳಗೆ ಸಮಾಧಾನಿಸಿತು.

ಭುಜಂಗರಾಯರು ತ್ರಿಪುರಪುರದ ಇಂಪೀರಿಯಲ್ ಬೇಂಕಿನಲ್ಲಿ ಸರಾಫರು. ಸರಾಫ ಭುಜಂಗರಾಯರೆಂದರೆ ಬಡವರಿಂದ ದೊಡ್ಡವರ ವರೆಗೆ, ಚಿಕ್ಕ ಕೂಸಿನಿಂದ ವೃದ್ಧರ ವರೆಗೆ ಪ್ರೀತಿಸಲ್ಪಡುತ್ತಿದ್ದ ವಾತ್ಸಲ್ಯ ಮೂರ್ತಿ. ಅವರ ಒಂದು ನಗೆಯು ವಾತಾವರಣವನ್ನೇ ಪ್ರಕಾಶಮಾನವಾಗಿಸುತ್ತಿತ್ತು. ಅವರ ಸೌಶೀಲ್ಯ, ಮೆಲುಮಾತು, ದಯಾಪರತೆಗಳು ಕಲ್ಲನ್ನು ಕರಗಿಸುತ್ತಿದ್ದುವು-, ಕಂಭವನ್ನು ಮರುಗಿಸುತ್ತಿದ್ದುವು. 180 ರೂಪಾಯಿ ಸಂಬಳ ಸಿಗುತ್ತಿದ್ದರೂ ಅವರದನ್ನು ಸ್ವಾರ್ಥಕ್ಕಾಗಿ ಉಪಯೋಗಿಸಿದ ದಿನವೇ ಇದ್ದಿಲ್ಲ. ಕುಟುಂಬ ರಕ್ಷಣೆಯನ್ನು ಚೆನ್ನಾಗಿ ಮಾಡಬೇಕು—ಅದರೊಡನೆ ದೇಶದ ಸೇವೆಯನ್ನು ಕೈಲಾದಷ್ಟು ಮಾಡಬೇಕು-ಕೀರ್ತಿಶಾಲಿಯಾಗಿ ಬಾಳಬೇಕು ಎಂಬುದೇ ಅವರ ಹೃದಯದ ಕಾತುರ, ಆತುರ.

ಸೋಮವಾರ ದಿನ ಭೂಕಂಪವಾಗುವುದೆಂದು ದೇಶದಲ್ಲೆಲ್ಲಾ ವಾರ್ತೆ ಎದ್ದಿತು. ಆದರೆ ಜ್ಯೋತಿಷ್ಯವನ್ನು ನಂಬುವವರು ಹೆಚ್ಚಾಗಿರುತ್ತಾರೆಯೇ? ಆ ವಾರ್ತೆಯು ಜನರ ಕುರುಡು ಕಿವಿಗಳನ್ನು ಹೊಕ್ಕವು. ಅದನ್ನು ನಿರೀಕ್ಷಿಸಿದವರು ಸಾವಿರದಲ್ಲಿ ಒಬ್ಬರು.

ಮಧ್ಯಾಹ್ನ 2-35 ದಾಟಿತಷ್ಟೆ—, ಒಡನೆ ದೂರದಿಂದ ಭಯಂಕರ ಶಬ್ದವೆದ್ದಿತು. ಆಕಾಶ ಮಾರ್ಗವಾಗಿ ವಿಮಾನ ಬಂದಿತೆಂದು, ಮೇಲೆ ನೋಡಿದವರು ಅನೇಕರು. ದೂರದಿಂದ ಮೋಟರು ಗಾಡಿ ಓಡುತ್ತಿದೆಯೆಂದು ಆಲಿಸಿದವರು ಹಲರು. ಸುಂಟರ ಗಾಳಿಯು ಮುಂದರಿಯುತ್ತಿದೆಯೆಂದು ಕಿವಿಗೊಟ್ಟವರು, ನೋಡುತ್ತಿದ್ದವರು ಹೆಚ್ಚಿನವರು. ಅಷ್ಟರಲ್ಲಿ, ಭೀಕರ ಗಾಳಿಯು ಪೂರ್ವದಿಂದ ರುಮ್ಮ ರುಮ್ಮನೆ ಬೀಸಿ ಬಂತು. ಅದರೊಡನೆ ಭೂಮಿಯು ಅದುರಿತು!!! ಕುಳಿತ್ತಿದ್ದ ರೈಲುಗಾಡಿಯು ಧಡಾಲ್ಲನೆ ಧಕ್ಕೆ ಹೊಡೆದು ತಟ್ಟನೆ ನಿಂತು ಕಂಪಿಸಿದಂತಹ ಕಂಪನ! ಒಂದು; ಎರಡು, ಮೂರು ಮಿನಿಟುಗಳ ತನಕ ಅದೇ ಕಂಪನ! ಅದೇ ತಾಟಸ್ಥ್ಯ-ಒಡನೆ ಪುನಃ ಭೀಷಣ ನಡುಕ-ಎಲ್ಲೆಲ್ಲಿಂದಲೂ ಲಠ ಲಠಾ ಎಂಬ ಶಬ್ದ. ಸಾವಿರಾರು ಮನೆ ಮಂದಿರಗಳು ಜರಿದು ಬಿದ್ದುವು. ಭೂಮಿಯು ತೊಟ್ಟಿಲಿನಂತೆ ಉಯ್ಯಾಲಿಸಲಾರಂಭ! ಪುನಃ ಮೊದಲಿಗಿಂತ ದೊಡ್ಡ ಶಬ್ದಗಳು ದೂರದಿಂದ! ತ್ರಿಪುರಪುರದ ಇಂಪೀರಿಯಲ್ ಬೇಂಕು ಭಡಾಲ್ಲನೆ ಮಲಗಿತು. ಒಳಗಿನ ಎತ್ತರವಾದ ಗೋಡೆಯೊಂದು ಹತ್ತು ಮಂದಿಗಳ ಮೇಲೆ ಮಲಗಿತು. ಹಾಯ್! ಭುಜಂಗರಾಯರು ಬಿದ್ದರೇ? ಇಲ್ಲ, ಅದೃಷ್ಟವಶಾತ್ ತಪ್ಪಿದರು. ಆದರೆ ತಾನು ತಪ್ಪಿದೆನೆಂದು ಪ್ರಾಣದಾಶೆಯಿಂದ ಹೊರಗೋಡಲಿಲ್ಲ. ಅವರು ಸ್ತಬ್ಧರಾದರು. ದೃಢರಾದರು. ಬಳಿಯ ಆರ್ತ ನಾದದಿಂದ ಅವರ ಹೃದಯವು ಸುಟ್ಟಿತು. ಸ್ನೇಹಿತನ ಹೃದಯದ ಕರೆಯು ಗೋಡೆಯ ಅಡಿಯಿಂದ ಕೇಳುವುದನ್ನು ಆಲಿಸಿ ಗೋಡೆಯ ಕಲ್ಲೊಂದನ್ನೆತ್ತಿ, ಈಚೆಗೆಳೆದು, ಅವಸರದಿಂದ ಅವನ ಬಲಗೈಯನ್ನು ಹಿಡಿದೆತ್ತಿದರು. ಕೂಡಲೇ ಬೇಂಕಿನ ಮಾಡಿನ ಒಂದು ಪಾರ್ಶ್ವವು ಅವರ ಮೇಲೆ ಹಾರಿ ಬಿತ್ತು!!! ಅಯ್ಯೊ!

ಭುಜಂಗರಾಯರು ಕಾಣೆಯಾದರು! ಕೀರ್ತಿಯು ಮೂರ್ತಿಯೂ ಕಣ್ಮರೆಯಾಯಿತು!

* * * *

25,000 ಜನರು ಭೂಕಂಪದಿಂದ ಪ್ರಾಣಬಿಟ್ಟರು. 4 ಲಕ್ಷ ಜನರು ಜಖಂಗೊಂಡರು. 8 ಮಿಲಿಯ ಜನರು ನಿರಾಶ್ರಿತರಾದರು. ಅಸಂಖ್ಯಾತ ಕುಟುಂಬಗಳು ಗತಿವಿಹೀನವಾದುವು.

ಗಂಡನಿದ್ದ ವೇಳೆ ರತ್ನಮ್ಮಳ ಮನೆಯಲ್ಲಿ ಅತಿಥಿಗಳಿಗೆ ಊಟವೇನು? ಸತ್ಕಾರವೇನು? ಯಾವ ದಿನ ಕೇಳಿದರೂ ಅವರ ಬಂಗಲೆಯಿಂದ ಹಾರ್ಮೋನಿಯಂ, ಗ್ರಮೊಫೋನ್‌ಗಳ ಇಂಪಾದ ಕಂಪು ಬೀರುವ ಗಾನ. ಬಿ. ಎ. ಕಲಿಯುತ್ತಿರುವ ಗೋಪಾಲದಾಸನಿಂದ ಮೊದಲುಗೊಂಡು ಕನ್ವೆಂಟಿನಲ್ಲಿ ಎರಡನೆ ದರ್ಜೆಯಲ್ಲಿರುವ ಲಚ್ಚುಳ ವರೆಗಿನ ಅವಳ ಮಕ್ಕಳು ಕಷ್ಟವೇನೆಂಬುದನ್ನರಿಯರು; ಜೀವನವೆಂಬುದೆಂದರೇನೆಂದು ತಿಳಿಯರು. ಐದಾರು ತರದ ಪದಾರ್ಥ ಪರಮಾನ್ನಗಳಿಲ್ಲದೆ ಅವರ ನಿತ್ಯಭೋಜನವು ನಡೆಯುತ್ತಿದ್ದಿಲ್ಲ. ಸಿನೆಮ, ನಾಟಕಗಳು ಅವರನ್ನು ನೋಡದೆ ಊರಿಂದ ತೆರಳವು. ಒಂದು ಮೈಲು ನಡೆಯಬೇಕಾದರೆ ಗಾಡಿ! ಭೂಕಂಪದಿಂದ ಜಖಂಗೊಂಡು ತೀರಿ ಹೋದ ರತ್ನಮ್ಮಳ ತಂದೆಯು ಹರಕು ಬಾಯಿಯ ಕಿರಿಕಿರಿಯೊಂದನ್ನಲ್ಲದೆ ರತ್ನಮ್ಮಳು ಕೂಡಾ ಕೆಟ್ಟ ಮಾತೆಂದರೇನೆಂದು ತಿಳಿದಿರಲಿಲ್ಲ. ಸಂಪಾದನೆ ಮಾಡಬೇಕು—ತಿನ್ನಬೇಕು ಎಂಬುದೇ ಈ ಸಂಸಾರದ ಮೂಲತತ್ವವಾಗಿದ್ದಿತು. ಕಷ್ಟಕಾಲಕ್ಕೆ ಏನನ್ನಾದರೂ ಮಿಗಿಸಿಡಬೇಕೆಂದು ರತ್ನಮ್ಮಳಿಗೂ ಇದ್ದಿಲ್ಲ-ಅಲ್ಲದೆ ಭುಜಂಗರಾಯರಿಗೂ ಇದ್ದಿಲ್ಲ. ಭುಜಂಗರಾಯರ ಮಾಸಿಕ ತಲಬು ಮಾತ್ರ ಕುಟುಂಬದ ಬೊಕ್ಕಸವಾಗಿದ್ದಿತು.

ರತ್ನಮ್ಮಳ ಕೈ ಬಳೆಗಳೂ ಮಾರಿ ಹೋದುವು! ಬಂದ ಹಣವೂ ತೀರಿ ಹೋಯಿತು, ಮುಂದೇನು? ಅವಳಿಗೆ ಪ್ರಾಣತ್ಯಾಗವೇ ಮೇಲೆಂದು ಕಂಡು ಬಂತು. ಒಂದು ದಿನ ಗೋಪಾಲದಾಸನನ್ನು ಕರೆದು ಕುಟುಂಬದ ಸ್ಥಿತಿಯನ್ನು ವಿವರಿಸಿ ಹೇಳಿದಳು. ಪಾಪ! ಅವನೇನು ಮಾಡಿಯಾನು? ಶಾಲೆಯನ್ನು ಅರ್ಧದಲ್ಲೇ ಬಿಟ್ಟು ದಾರಿದ್ರ್ಯ ದೇವತೆಯ ಪರಿಚಯದಿಂದ ಕದಡಿದ ಹೃದಯವಂತನಾದ ಅವನಿಗೆ ಮಾತೆಯ ನುಡಿಗಳು ಶೂಲದಂತೆ ತಗಲಿದುವು. "ಅಮ್ಮಾ. ದುಃಖಿಸಬೇಡ—ನಾವು ಆರು ಜನ ಮಕ್ಕಳಿರುವೆವು, ಬೇಡಿಯಾದರೂ ತರುವೆವು, ಬದುಕೋಣ. ದೇವರು ಕೊಟ್ಟುದನ್ನು ಬೇಡವೆನ್ನಬಾರದು; ಲೋಕವು ನೊಂದಿದೆ. ನಮ್ಮ ಗತಿಯೇನು? ಚಿಂತೆ ಪಡಬೇಡ. ಇಂಪೀರಿಯಲ್ ಬೇಂಕನ್ನು ಸಜ್ಜುಗೊಳಿಸುತ್ತಿರುವರು, ಇನ್ನು ಮೂವತ್ತು [illegible]ಳಗೆ ಕೆಲಸವಾರಂಭವಾಗುವುದು. ಅಲ್ಲಿ [illegible] ಯುವ ಅಂದಾಜಿದೆ" ಎಂದನು. ರತ್ನಮ್ಮಳು ಕಣ್ಣೀರಿನ [illegible] ಯಿಂದಿರುವ [illegible]ದಳು. ಮಗನ [illegible]ತು ಅವಳಿಗೆ [illegible]ಯುಂತಾಯಿತು.

ಅಂದು ಆದಿತ್ಯವಾರ.. ಗೋಪಾಲದಾಸನು ಬುಕ್ ಕೀಪಿಂಗ್ ಪುಸ್ತಕವೊಂದನ್ನು ಮಿತ್ರನೊಬ್ಬನಿಂದ ಬೇಡಿ ತರುವುದಕ್ಕಾಗಿ ಬಾರಾ ಬಝಾರಿನಲ್ಲಿ ಮುನ್ನಡೆಯುತ್ತಿದ್ದನು. ಅವನ ಮುಖವು ಕಪ್ಪಿಟ್ಟಿದ್ದಿತು. ಬಹು ಯೋಚನಾಪರನಾಗಿದ್ದಂತೆ ಕಾಣುತ್ತಿದ್ದಿತು. ಮೊದಲು ಎರಡು ದಿನಗಳಿಗೊಮ್ಮೆ ಕ್ಷೌರ ಕತ್ತಿಯನ್ನು ಕಂಡಿದ್ದ ಅವನ ಗಡ್ಡವು ಈಗ ವಾರಕ್ಕೊಮ್ಮೆಯೂ ಅದನ್ನು ಕಾಣುವಂತೆಯೇ ಇಲ್ಲ. ಧನವಿದ್ದರೆ ಮನ—ಅದಿಲ್ಲದಿದ್ದರೆ ಹೆಣ! ಭೂಕಂಪದಿಂದ ಬಿದ್ದಿರುವ ಸಾವಿರಾರು ಮನೆ ಕಟ್ಟಡಗಳನ್ನು ಕಂಡಾಗ ಅವನಿಗೆ ತಂದೆಯ ನೆನಪುಂಟಾಗುವುದು. ಅವನು ಬಿಸಿಯುಸಿರನ್ನು ಬಿಡುವನು. ಪುನಃ ತನಗೆ ಉದ್ಯೋಗ ದೊರೆತರೆ ಕಷ್ಟವು ಪಾರಾಗುವುದು ಎಂಬ ಭಾವನೆಯಾದೊಡನೆ ನಿರಾಶೆಯ ಮೇಘಾಚ್ಛಾದಿತ್ಯವಾದ ಅವನ ಹೃದಯದಲ್ಲಿ ಆಶೆಯ ಚಂದ್ರೋದಯವಾಗುವುದು. ನಡೆಯುತ್ತಾ, ಏಕೋ 'ದೇವ' ಎಂಬ ಮೆಲ್ಮಾತು ಅವನ ತುಟಿಯಿಂದಾಗಿ ಹೊರ ಬಿತ್ತು. ಕೂಡಲೇ ಹಿಂದಿನಿಂದ 'ಗೋಪಾಲ್' ಎಂದು ಯಾರೋ ಕರೆದಂತಾಯಿತು. ಗೋಪಾಲದಾಸನು ನಡೆಯುತ್ತಿದ್ದಂತೆ ಹಿಂದೆ ಮುಖ ತಿರುಗಿಸಿ ನೋಡಿದನು. ಅವನ ಬೆನ್ನ ಹಿಂದೆ ಅವನ ಸಹಪಾಠಿ ಶಂಕರಲಾಲನು ಬರುತ್ತಿದ್ದನು-

'ಎಲ್ಲಿಗೆ ಗೋಪಾಲ್?'

'ಚಂದ್ರಶೇಖರನ ಮನೆಗೆ—ಒಂದು ಬುಕ್‌ಕೀಪಿಂಗ್ ಪುಸ್ತಕ ಬೇಕಿತ್ತು'

"ಶಾಲೆ ಬಿಟ್ಟದೆಯೋ!"

"ಹೌದು!"

"ನಿನ್ನ ತಂದೆಯ ಇನ್ಶೂರ್ ಹಣ ದೊರೆಯಿತೋ?"

"ಯಾವ ಇನ್ಶೂರ್?"

"ಮೊನ್ನೆ ಮನೆಯಲ್ಲಿ ತಂದೆಯವರು ನಿಮ್ಮ ಕುಟುಂಬದ ಕಷ್ಟದ ಕುರಿತು ನನ್ನ ತಾಯಿಯೊಡನೆ ಮಾತನಾಡುತ್ತಿದ್ದರು, ನಿನ್ನ ತಂದೆ ತೀರಿಕೊಂಡುದುದರಿಂದ ನಿಮಗೆಲ್ಲ ಬಹಳ ಕಷ್ಟ ಬಂತೆಂದು ತಾಯಿ ಹೇಳಿದರು. ಆಗ ತಂದೆಯವರು ತಾನು ನಿನ್ನ ತಂದೆಯನ್ನು ಕೆಲವು ತಿಂಗಳುಗಳ ಹಿಂದೆ ಇನ್ಶೂರಿಗೆ ಸೇರಿಸಿರುವೆನೆಂದೂ, ನಿಮಗೆ ಕೆಲ ಕಾಲಕ್ಕೆ ಕಷ್ಟವಿಲ್ಲವೆಂದೂ ಹೇಳಿದರು."

'ಅವರು ಇನ್ಶೂರ್ ಮಾಡಿದ ವಿಷಯ ನನ್ನ ತಾಯಿಗೂ ತಿಳಿದಿಲ್ಲ.

* * * *

ಗೋಪಾಲದಾಸನು ಬುಕ್ ಕೀಪಿಂಗ್ ಪುಸ್ತಕಕ್ಕಾಗಿ ಮುಂದಡಿಯಿಡಲಿಲ್ಲ. ಶಂಕರಲಾಲನು ಅತ್ತ ತೆರಳಿದೊಡನೆ ಅವನು ನೆಟ್ಟಗೆ ಮನೆಗೆ ಬಂದು ತಂದೆಯ ಇನ್ಶೂರಿನ ಕುರಿತು ತಾಯಿಗೆ ಹೇಳಿದನು . . . . . . . ಎಲ್ಲರೂ ಹುಡುಕಿದರು ಪೊಲಿಸಿಯನ್ನು! ಕೊನೆಗೆ ಭುಜಂಗರಾಯರ ಹಳೇ ಮೆಟ್ರಿಕ್ ಸರ್ಟಿಫಿಕೇಟು ಪುಸ್ತಕದಲ್ಲಿ ಪೊಲಿಸಿಯು ದೊರೆಯಿತು. [illegible] ರೂ. 3000ಕ್ಕೆ [illegible]

[illegible]

[illegible]

# ಬಡವರ ಬಂಧು ಹಾಸ್ಯೌಷಧಾಲಯ.

ತಾಯಿಯು ತನ್ನ ಕಿರಿ ಮಗನನ್ನು ಹುಡುಕಿ ಹುಡುಕಿ ಕಾಣಲಾರದೆ ಹಿರಿ ಮಗನನ್ನು ಕುರಿತು:—ಮಗೂ ತಿಮ್ಮನೆಲ್ಲಿ?

ಹಿರಿಮಗ:—ಅಮ್ಮಾ, ಅವನೆಲ್ಲಿರುವನೆಂದು ಹೇಳು. ನಾನು ತೋರಿಸುವೆನು.

*  *  *  *

ಆಕೆ:—ಹಾಲಿನವಳ ಮನೆಗೆ ಬೆಂಕಿ ಬಿದ್ದಿರುವುದಂತೆ.

ಈಕೆ:—ಅವಳಿಗೆ ನೀರಿಗೇನು ಕೊರತೆಯೆ?

*  *  *  *

ತಂದೆ:—ಮಗೂ, ಬಡವರ ಬಂಧುಗಳು ಯಾರು?

ಮಗ:—ಮಹಾತ್ಮಾ ಗಾಂಧಿಜೀ.

ತಂದೆ:—ದೊಡ್ಡವರ ಬಂಧುಗಳು ಯಾರು?

*  *  *  *

ಕ್ರೈಸ್ತ ಕುಡಿಕನಿಗೆ ಮೆಜಿಸ್ಟ್ರೇಟರು:—ಸಾರಾಯಿ ನಿನ್ನ ಶತ್ರು. ಅದನ್ನು ನಿನ್ನ ಹತ್ತಿರಕ್ಕೆ ಬರಲಿಸಬೇಡ ಎಂದು ಮೊದಲೊಮ್ಮೆ ಎಚ್ಚರಿಸಿದೆನಲ್ಲಾ! ಇನ್ನೊಮ್ಮೆ ಅದೇ ತಕ್ಷೀರನ್ನು ಮಾಡಿದೆಯಾ?

ಕುಡಿಕ:—ಮಹಾಸ್ವಾಮಿ, ನಿಮ್ಮ ಅಪ್ಪಣೆಯು ನನ್ನ ತಲೆಯ ಮೇಲೆಯೇ ಇದೆ. ಆದರೆ 'ನಿಮ್ಮ ಶತ್ರುಗಳನ್ನು ಪ್ರೀತಿಸಿರಿ' ಎಂದು ನಮ್ಮ ವೇದವು ಹೇಳುತ್ತದೆ. ಅದಕ್ಕಾಗಿಯೇ ಸರಾಯಿಯನ್ನು ಪ್ರೀತಿಸುತ್ತೇನೆ.

*  *  *  *

'ಏನಿರಿ? ಬೀಡಿ ಎಳೆಯಬಾರದಾಗಿ ಇಲ್ಲಿ ನೋಟೀಸು ಹಚ್ಚಿದ್ದು ಕಾಣುವುದಿಲ್ಲವೇ?'

"ನೋಟೀಸು ಕಾಣುತ್ತದೆ. ನನಗೆ ಓದಲಿಕ್ಕೆ ಮಾತ್ರ ಬರುವುದಿಲ್ಲವಲ್ಲ!"

*  *  *  *

ಒಬ್ಬ:—ರೈಲು ಕಂಬಿ ತಪ್ಪಿ ಬಿದ್ದುಬಿಟ್ಟಿತು. ತುಂಬಾ ನಷ್ಟ.

ಇನ್ನೊಬ್ಬ:—ನಷ್ಟವೇನು? ಲಾಭವೇ!

ಒಬ್ಬ:—ಅದು ಹೇಗೊ?

ಇನ್ನೊಬ್ಬ:—ಅದರಲ್ಲಿದ್ದ ಪ್ರಯಾಣಿಕರಿಂದ ಸಾಲ ಪಡಕೊಂಡವರಿಗೆ.

*  *  *  *

ರಾಮು:—ಪ್ರಯಾಣಕ್ಕೆ ಹೊರಡುವಾಗ ಮನೆಗೆ ಬೆಂಕಿ ಬಿದ್ದುದು ಕಂಡರೆ ಶುಭವೋ ಅಶುಭವೋ?

ಕೃಷ್ಣ:—ನಮ್ಮ ಮನೆಗಲ್ಲದಿದ್ದರೆ ಶುಭವೇ ಸರಿ!

*  *  *  *

ಏನೋ. ಮೊನ್ನೆ ನೀನು ವಿಷ ತಿಂದು ಸಾಯುತ್ತೇನೆಂದು ಹೆದರಿಸಿದೆಯಲ್ಲ?

ಈ ಒಂದೆರಡು ಮೂರು ದಿನಗಳಿಂದ ಮೈ ಚೆನ್ನಾಗಿಲ್ಲ. ಸ್ವಲ್ಪ ಹುಷಾರಾಗಲಿ. ಮತ್ತೆ ನೋಡು.

*  *  *  *

ಭಾಷಣ ಮಾಡುತ್ತಿದ್ದವ:—ಈ ವರೆಗೆ ಯಾರಾದರೂ ತಣ್ಣೀರು ಕುಡಿದು ಸತ್ತುದುಂಟೇ? ನಿಜವಾಗಿಯೂ ಅದು ದೇಹಕ್ಕೆ ಒಳ್ಳೆಯದು.

ಸಭಿಕರಲ್ಲೊಬ್ಬ:—ಸ್ವಾಮಿ: ನಿನ್ನೆ ರಾತ್ರಿ ನಮ್ಮ ಪಕ್ಕದ ಮನೆಯಲ್ಲಿ ಪುಟ್ಟನು ಬಾವಿಯಲ್ಲಿ ಬಿದ್ದು ತುಂಬಾ ನೀರು ಕುಡಿದು ಸತ್ತನಲ್ಲ.

*  *  *  *

ಗುರು:—ಅಬಲೆ ಎಂದರೇನು?

ಶಿಷ್ಯ:—ಹೆಂಗಸು (ಬಲ ಇಲ್ಲದವಳು)

ಗುರು:—ಅದು ಹೇಗೆ?

ಶಿಷ್ಯ:—ಗಂಡನು ಹೊಡೆಯುವಾಗಿ ಪ್ರತಿ ಹೊಡೆಯದ್ದರಿಂದ

*  *  *  *

ಮುತ್ತು ಮಾರುವವ—(ವೇಶ್ಯೆಯ ಮನೆಹೊಕ್ಕು) ಮುತ್ತು ಬೇಕೋ ಮುತ್ತು!

ವೇಶ್ಯೆ—ನಮ್ಮಲ್ಲಿ ಅದಕ್ಕೆ ಕುಟ್ಟಿಯೇ?

## ಮುಶಿಮೆಶಿನ್!

ಧರ್ಮಾರ್ಥ! ಅಲಭ್ಯಲಾಭ ನಷ್ಟ! ಈಗೀಗ ಮುಶಿಗಳ ಕಾಟ ಬಹಳವಾಗಿದೆ. ರಾತ್ರಿ ಮಲಗಿಕೊಳ್ಳುವಾಗ ಒಬ್ಬ ಎಚ್ಚರವಾಗಿಯೇ ಕುಳಿತಿರಬೇಕಾಗುತ್ತದೆ—ಶಿಕಾರಿ ಮಾಡಲಿಕ್ಕೆ. ಈ ಮುಶಿಗಳ ತೊಂದರೆ ಬಹು ಸುಲಭದಿಂದ ತಪ್ಪಿಸಲು ಒಂದೇ ಒಂದು ಉಪಾಯವೆಂದರೆ ನಮ್ಮ ಈ ಮುಶಿಮೆಶಿನ್ ಎಂಬ ಯಂತ್ರವನ್ನು ಈಗಲೇ ಕೊಂಡುಕೊಳ್ಳಿರಿ. ಈ ಯಂತ್ರವನ್ನು ಬಹು ಮಿದುವಾದ ಕಬ್ಬಿಣದಿಂದ ರಚಿಸಿರುತ್ತೇವೆ. ರಾತ್ರಿ ಮಲಗಿಕೊಳ್ಳುವಾಗ ಈ ಯಂತ್ರವನ್ನು ಬಳಿಯಲ್ಲಿಟ್ಟುಕೊಂಡು ಕಚ್ಚಲು ಬಂದ ಮುಶಿಗಳನ್ನು ಒಂದೊಂದೇಯಾಗಿ ಹಿಡಿದು, ಈ ಯಂತ್ರದಲ್ಲಿದ್ದ ಬಿರುಕಿನೊಳಗೆ ಪ್ರಯತ್ನಪೂರ್ವಕವಾಗಿ ತುರುಕಿ, ಬಲವಾಗಿ ಎರಡೂ ಪಕ್ಕಗಳನ್ನು ಒತ್ತತಕ್ಕದ್ದು. ಮುಶಿ ಸಂಪೂರ್ಣ ಸತ್ತುಹೋಗುತ್ತದೆ. ಮತ್ತೆ ಆ ಸತ್ತ ಮುಶಿಯಿಂದ ನಿಮ್ಮ ನಿದ್ದೆಗೇನೂ ತೊಂದರೆ ಇರುವುದಿಲ್ಲ.

ಈಗಲೇ ಬರೆಯಿರಿ:—

**ಮುಶಿಮೆಶನ್ ಕಂಪೆನಿ,**
ಹೆಗ್ಗಣ ಬಿಲ್ಡಿಂಗ್,
ಇಲಿಯೂರು ಸ್ಟ್ರೀಟ್,
ಬೆಕ್ಕೂರು ಪೋಸ್ಟ್,
**ನಾಯಿಯೂರು ತಾಲೂಕು.**

# ಮೈಸೂರು ನರ್ಸಣ್ಣನ ಚಾಕು ಚೀಕೆ!

ಲೈ:—ಮಿಸ್ಟರ್ ಮೈಸೂರು ನರ್ಸಣ್ಣ.

ಶುಭ ಶೋಭನವಾಗುತ್ತೆ. ಮದುವೆಯ ಮನೆಯಲ್ಲಿ ಮದುವೆಯಾಗುತ್ತೆ. ಮರಣದ ಮನೆಯಲ್ಲಿ ಮರಣವಾಗುತ್ತೆ. ದಕ್ಷಿಣ ಕನ್ನಡ ಜಿಲ್ಲೆಗೆ ಶುಭವಾಗಿದೆ. ಬಿಹಾರ್ ಕಲ್ಕತ್ತಗಳಲ್ಲಿ ಭೂಕಂಪವಾಗಿದೆ. ಅರಸರು ಗವರ್ನರರುಗಳಿಂದ ಬರೀ ನಾಲ್ಕೈದು ಸಾವಿರ ರೂಪಾಯಿಗಳಷ್ಟೇ ಅರ್ಪಿಸಲಾಗಿದೆ. ನನ್ನೊಡೆಯ, ಮೈಸೂರು ಮಹಾರಾಜ್ರು ಇಂದ್ನ ತನಕ ಭೂಕಂಪದ ದುಃಸ್ಥಿತಿಗಾಗಿ ಪೈಯೊಂದು ಬಿಟ್ಟದ್ದೂ ಗೊತ್ತಾಗಿಲ್ಲ. ವಿಚಿತ್ರವೆನ್ನಬೇಕು! ಮಂಗಳೂರು ಮ್ಯುನ್ಸಿಪಾಲಿಯವರೇನಾದ್ರೂ ಇದ್ಕಾಗಿ ಪ್ರಯತ್ನಿಸಿರುವರೋ? ಇಲ್ಲ ಸಾಮಿ, ಇಲ್ಲ ದೇವ್ರೆ. ಇಂತದಕ್ಕೆಲ್ಲಾ ಅವರಿಲ್ಲ. ಗನ್‌ಬೋಟ್‌ನಂತಹ ಊರಿಗೆ ಉರಿ ಹಚ್ಚುವ ರಾಯರುಗಳಿಗೆ ಉಳುಕೊಳ್ಳುವರೇ ಬೇಕಿದ್ರೆ ಎರ್ಡು ತಿಂಗ್ಳುಗಳ ಪರವಾನ್ಗೆಯನ್ನು ಕೊಡಬಲ್ರು—ಮಂಗಳೂರಿನ ಈ ವರ್ಷದ ಮ್ಯುನ್ಸಿಪಾಲ್ಟಿಯವರು. ಆದ್ರೆ ಒಂದು ಸ್ವಾಮಿ. ಅವರು ಎಷ್ಟೆಂದರೂ ಫೆಮಿಲಿ ಪಾಸ್ ಕೊಡುತ್ತಾರಲ್ಲ ಸಾಮಿ. ಮತ್ತೇಕೆ ಅವರಿಗೆ ಆ ರೀತಿ ತೋರ್‍ಸ್ಬಾರ್‍ದು? ಪಾಪ! ಗನ್‌ಬೋಟ್ನವರ್ಗೆ ಇಷ್ಟುದ್ದುದ್ದ ಪರವಾನ್ಗೆ ಕೊಟ್ಟವರು ಯಾರೆಂದು ಗೊತ್ತಾಗಿಲ್ಲ ರಾಯರೇ, ನಗರಪಿತೃಗಳಾದ ಮ್ಯುನ್ಸಿಪಾಲ್ಟಿಯವರು ತಮ್ಮ ಒಬ್ಬೊಬ್ರ ಅನುಕೂಲಕ್ಕಾಗಿ ಪುರಜನ್ರನ್ನು ಆರ್ಥಿಕ ಅಡ್ಚಣೆಗಳ್ಗೆ ಬಲಿ ಕೊಡ್ವುದು ಸರಿಯೋ? ಗಾಂಧೀಯಪ್ಪನೋರು ಬರ್‍ತೇನೆ. ಬರೋದಿಲ್ಲ. ಬರ್‍ತೇನೆ. ಬರೋದಿಲ್ಲವೆಂದು ಬರ್‍ಲೇ ಇಲ್ಲ. ಅದೇಕೆಂತೀರಾ? ಅವ್ರ ತತ್ವವೆಂದ್ರೆ ಪ್ರಥಮತಾ "ನಿಮ್ಮ ಅಂತಃಶುದ್ಧಿ ಮಾಡ್ಕೊಳ್ಳಿ, ನಂತ್ರ ಹರಿಜನರನ್ನುದ್ಧರ್‍ಸಲಿಕ್ಕೆ ಕೈ ಹಾಕಿ" ಅಂತ. ಮಂಗ್ಳೂರಲ್ಲಿ ಅಂದು ಲಾಥಿ ರಾಜ್ಯವಾಗ್ಬುಕ್ಕೆ ಮುಂಚೆ ದೊಡ್ಡದೊಡ್ಡವ್ರು ಬಂದು ದೊಡ್ಡ ದೊಡ್ಡ ಲೆಕ್ಚೆರು ಕೊಟ್ರು. ಲಾಥೀ ಬಂತೆನ್ವಾಗ ಗಾಂಧೀ ಟೋಪಿಗಳನ್ನೆಲ್ಲಾ ಮೂಲ್ಗೆ ಹಾಕಿ ಮನೆಯೊಳ್ಗೆ ಕುಳ್ತು ಬಿಟ್ರು. ಪಾಪ್ದವರನ್ನು ಮುಂದೆ ದೂಡ್ದರು. ಈಗ್ಲೂ ಹರಿಜನರುದ್ಧಾರ ಎಂದು ಉದ್ದುದ್ದ ಭಾಷಣ ಮಾಡ್ತಾರಷ್ಟೆ. ತಮ್ಮ ತಮ್ಮ ಮನೆಗಳ್ಗಿಷ್ಟು ಮುಂದಿ ಹರಿಜನ್ರನ್ನು ಬಿಟ್ಟಿದ್ದಾರೆ. ಆಚಾರವಂತ ಹೆಂಡ್ತಿ "ಹಾಂ ಹೂಂ ಜೋಕೆ ಹರಿಜನ್ರ ಹೆಸರೆತ್ತೀರಿ!" ಎಂದೊಡ್ನೆ ತಲೆ ಮುದುಡ್ಸಿ ಕುಳ್ತುಕೊಳ್ವ ಕೊಣಪ್ರಿಗೇಕೆ ಹರಿಜನೋದ್ಧಾರದ ವಿಷ್ಯ. ಮೊದಲಾಗಿ ತಮ್ಮ ಮನೆಗಳಲ್ಲಿರ್ವ ಕುಂಟೆಸ್ರನ್ನು ಸರಿಮಾಡಿ ಕೊಳ್ಳಿ. ನಂತ್ರ ಬನ್ನಿ ಹೊರ್‍ಗೆ!

ಮುಂಬಾರ್‍ಯ್ನ ಬು—ಹಾ—ಪಂಡ್ತರೊಬ್ರು(?) ನನ್ನೊಂದಿಯೊಬ್ರೊಡ್ನೆ ಈಗ್ನ ಪತ್ರಿಕೆಗಳಿಂದೇನು ಪ್ರಯೋಜ್ನವಯ್ಯ ಎಂದ್ರಂತೆ! ಇವ್ರ ಮುಖಿಕ್ಕೀಗ ಭಲೇ ಬೇಷನ್ನ ಬೇಕ್ಸಾಮಿ. ಇವ್ರಿಗೆ ಉದ್ಯೋಗ್ವಿಲ್ಲವಂತೆ. ಇಷ್ಟಾದ್ರೂ ಹೇಳ್ತಿದ್ರು ಮತ್ತವ್ರಿಗೆ ಬೇರೆ ಕೆಲ್ಸವೇನು? ನನ್ನ ಬಿತ್ತರು ಪತ್ರಿಕೆಗಳಿಂದಾದಷ್ಟು ಮೋಸ ಜನಗಳಿಗೆಲ್ಲಾ ಆಗ್ತಿದೆ. ಇನ್ನು ಪ್ರಯೋಜ್ನ ಬಂದ್ರೆ ಹೇಗೆ? ಇನ್ನ್ಮೆ ತಿಂಗ್ಳು ತಿಂಗ್ಳು ಒಂದೊಂದು ಸೇರು ಅಕ್ಕಿ ಪತ್ರಿಕೆಗಳ್ಗೆ ಕಟ್ಟಿ ಕಳುಹಿಸಬೇಕೇನೋ" ಎಂತ ಕೇಳ್ಬಿರಂತೆ. ಇದು ನನ್ನ ಹಾಲಕ್ಕಿ ನುಡ್ದ ನುಡಿಯಂತೆ.



ಮಂಗ್ಳೂರು ಹೆಡ್ ಪೋಸ್ಟಾಫೀಸಿನ ಪೋಸ್ಟು ಮೇನುಗಳ ಗಡಿಗಳನ್ನು ಅದ್ಲು ಬದ್ಲು ಮಾಡಿ ಡೆಲಿವರ್‍ಗೆ ಹಾಕಿ ಬಿಟ್ಟಾರೆ. ಇದ್ರಿಂದಾಗಿ ಸ್ವಲ್ಪ ಗೌಜೀಸಾಮಿ! ಅಂದ್ರೆ, ನಿತ್ಯ ಡೆಲಿವರಿ ಮಾಡ್ತಿದ್ದವರ್ಗೆ ಆಯಾಯ ವಿಳಾಸ ಸರಿ ಗೊತ್ತಿದ್ದು ಜಟ್ಪಟ್ ಡೆಲಿವ್ರಿ ಮಾಡ್ತಿದ್ರು. ಈಗ್ನವ್ರು ಕೇಳ್ತಾ ಕೇಳ್ತಾ ಡೆಲಿವ್ರಿ ಮಾಡ್ವಾಗ, ಡೆಲಿವ್ರಿ ಸಿಗ್ಬೇಕಾದ್ರೆ ರಾತ್ರಿ ಒಂಭತ್ತು ಗಂಟೆಯೂ ಆಗ್ಬಿಟ್ಟದೆ. ಮುಂದ್ಕೆ ಪೋಸ್ಟು ಮಾಸ್ಟರರ ಚಿತ್ತ! ವಾಚಕ್ರೆ ನನ್ನ ಈ ಹರ್‍ಕು ಪುರಾಣ ಕೇಳಿ ಬೇಸರವಾಗಿರಬಹ್ದು ನಿಮ್ಮ ಮನ್ಸಿಗೆ. ಅದ್ಕಾಗಿ ಒಂದು ಪಾದಾ ಹೇಳ್ತೇನಿ ಕೇಳಿ.

ಬೋಳೂರ ಗ್ರಾಮಾದಿ ಒಬ್ಬ!  
ಹಾಳೂರಿಂದಲಿ ಬಂದ ಸುಬ್ಬ!  
ಅವನ ನಾಲೀಗೆ ಎಷ್ಟುದ್ದ ಅಬ್ಬ!  
ಅವ ಹೇಳೀದ ಮಾತೆಲ್ಲ ಹಬ್ಬ!  
ಗ್ರಾಮಕ್ಕೆ ಅವನೊಬ್ಬ ಗೌಡ!  
ಅವ ಕುಡಿಯೋದು ದಿನವೆಲ್ಲ ಹೆಂಡ!  
ಮಾಡೋದು ಕೆಲಸವು ಭಂಡ!  
ಆಗ್ಹೋದು ಅವನೀಗೆ ದಂಡ!  
ಆದರು ಬಿಡನವ ಪುಂಡ!  
ಒಂದಿನ ಸುಳೀಯು ಕಂಡ!  
ಆದಾನು ಅವಳೀಗೆ ಗಂಡ!  
ಮುಟ್ಟಿದ ನರಕದ ಕುಂಡ!  
ಆಯಿತು ಅವನಿಗೆ ಹೊಂಡ!

ಪದಾ ಸಾಕ್ಸಾಮಿ. ಈ ಜಿಲ್ಲೆಗೆ ಭೂಕಂಪಾವಾಗದಿದೆ—ನಾನು ಬುದ್ಧಿ ಉಳಿದ್ರೆ—ಬರ್‍ವಾ ಸಂಚಿಕೇಲಿ ಚಲೋ ರೀತ್ಯಾ ಬರೀತೇನ್ಸಾಮಿ. ಗುಡ್‌ಮಾರ್ಲಿಂಗ್! ನಮಸ್ಕಾರ ಕೊಡಿ ಸ್ವಾಮಿ!

—+—+—

# ಧನಿಕನ ಪೈಶಾಚಿಕ ವೈಭವ.

ಲೇಖಕರು:—ಶ್ರೀ। ಅಡ್ಯಾರ ಶ್ರೀನಿವಾಸ ನಾಯ್ಕ, ಚೊಕ್ಕಪಟ್ಣ ಶಾಲೆ.

"ಪ್ರಪಂಚದಲ್ಲಿ ಧನವು ಮತ್ತು ಅದರ ಒಡನಾಡಿಗಳಾದ ಷಡ್ವೈರಿಗಳ ಸ್ಪರ್ಶದಿಂದ ಮಾನವರಿಗೆ ಇಹಪರಗಳೆರಡರಲ್ಲೂ ಸುಖವು ಲಭಿಸಲಾರದು. ಧನವು ಸ್ಥಿರವಲ್ಲ. ಅದರ ಆಕಾರವು ದುಂಡಗಾಗಿರುವುದರಿಂದ ಅದನ್ನೆಸೆದರೆ ಇಂಥ ಸ್ಥಳದಲ್ಲೇ, ಗಾಡಿಯ ಚಕ್ರದ ಹಾಗೆ ಬೀಳುವುದೆಂದು ಹೇಳಲರಿವಿಲ್ಲ. ಈ ಕಾರಣದಿಂದ ಮಹಾ ಯೋಗಿಗಳು ಈ ಧನವು ಚಂಚಲವೂ, ಭೂತ ಭವಿಷ್ಯಕಾಲದಲ್ಲಿ ಇರಬಹುದೆಂದು ಹೇಳಲಸಾಧ್ಯವಾದದ್ದೆಂದೂ ಹೇಳಿರುವರು; ಇದರ ಪ್ರತಿಯಾಗಿ ಪರಮಾತ್ಮನು ಭೂತಕಾಲದಲ್ಲಿ ಇದ್ದವನೂ, ಈಗ ಇರುವವನೂ ಮತ್ತು ಭವಿಷ್ಯಕಾಲದಲ್ಲಿ ಇರುವಂಥವನೂ ಎಂದು ಹೇಳಿ ಆತನ ಪವಿತ್ರವಾದ ಸಾನ್ನಿಧ್ಯವನ್ನು ಸೇರಿರುವರು.

ಇಹಲೋಕದಲ್ಲಿ ಅಸಂಖ್ಯಾತವಾದ ಐಶ್ವರ್ಯವು ಮಾನವನೊಬ್ಬನನ್ನಾಕರ್ಷಿಸಿದರೆ, ಆತನು ಕಾಮ ಕ್ರೋಧಮಯನೂ, ದುಷ್ಟನೂ ಆಗುವನು! ಈತನ ತಾಯಿಯ ಉದರದಿಂದ ಹೊರ ಬರುವಾಗಲೇ ಧನವನ್ನು ತಂದವನೆಂದು ಊಹಿಸಿ, ಅರ್ಥದ ಮೇಲೆ ಲೋಭವನ್ನಿಡುವನು! ಈ ತರದ ಲೋಭದಿಂದ ಲೋಕದ ಭಂಡಾರದಲ್ಲಿದ್ದ ಹಣವನ್ನು ಶೂನ್ಯಗೊಳಿಸಿ, ತಾನದನ್ನು ಸಂಗ್ರಹಿಸುವನು! ದಾನಧರ್ಮಗಳು ತಪ್ಪುವುವು! ಬಡವರಿಗೆ ಹೊಟ್ಟೆಯ ಕೂಳನ್ನೂ ಕೊಡದೆ ಅವರೆದುರಿನಲ್ಲಿ ಈ ನರಪ್ರಾಣಿಯು ವೈಭವದಿಂದ ಮೆರೆಯುವನು! ಸತ್ತ ಮೇಲೆ ಭಗ್ನವಾಗುವ ಈ ದೇಹವನ್ನು ಈ ನರಕ್ಷುದ್ರನು ಉಪಶಮನ ಮಾಡಿಸಿ ಸ್ಥಿರವೆಂದೆಣಿಸುವನೇ? ಹೀಗೆ ಮಾಡಿದರೂ ಆತನಲ್ಲಿ ಸುಖವು ನೆಲೆಗೊಳ್ಳುವುದೇ? ಇಲ್ಲ! ಇಲ್ಲ! ಸುಖವು ಲಭಿಸದು! ಈ ಧನಿಕನು ಕಷ್ಟಪಟ್ಟು ಕೆಲಸ ಮಾಡದೇ ಇದ್ದುದರಿಂದ ನಿದ್ದೆ ಹತ್ತಲಾರದು; ಅಲ್ಲದೆ ಬೊಜ್ಜು ಬೆಳೆಯುವುದು. ಇದರಿಂದ ಈತನನ್ನು ಅನೇಕ ಕಾಯಿಲೆಗಳು ಆವರಿಸುವುವು.

ಈ ಧನವು ಈ ಲೋಭಿಯ ಕಡೆ ಎಷ್ಟರ ತನಕ ಇರಬಹುದು? ಅರ್ಥವು ಚಂಚಲವೆಂದು ನಾವು ಮೊದಲೇ ಹೇಳಿಲ್ಲವೇ? ಸಿರಿವಂತನಿಗೆ ಅರ್ಥವು ಕಣ್ಣಮುಂದೆ ನಿಂತು ಅರಸಿನ ಮುಂಡಿಯ ರೋಗವಾಗಿ ಎಷ್ಟರ ತನಕ ಪೃಥ್ವಿಯು ಹೊಂಬಣ್ಣವಾಗಿ ಕಂಡೀತು? ಒಂದು ದಿನ ಈ ನರಾಧಮನು ಇಹಲೋಕವನ್ನು ಬಿಡನೇ? ಆಗ ಇವನು ಗಳಿಸಿದ ಅರ್ಥವು ಹುಣಸೆ ಬೀಜದ ಹಾಗೆ ಪರರ ಪಾಲಾಗಲಾರದೇ? ಆಗ ಲೋಕದ ಜನರಿಂದ ಕೆಟ್ಟ ಸೂತ್ರಗಳಿಂದ ಎಳೆದ ಧನವು ಅವರವರ ಭಂಡಾರದಲ್ಲಿ ಕಂಗೊಳಿಸದೆ ಇರಲಾರದು!

"ನರಾಧಮನಾ! ನೀನು ಸಿರಿವಂತನಾಗಿ ವೈಭವದಿಂದ ಮೆರೆದು, ಬಡವರ ಹೊಟ್ಟೆಯ ಕೂಳನ್ನು ಕಿತ್ತೆಗೆದುದ ಸಂಪಾದಿಸಿದ ನಿನ್ನ ಧನವು ಈಗೆಲ್ಲಿರುವುದು? ಮಂದಮತಿಯೇ! ನಿನ್ನ ನಡತೆಗೆ ಸಿಕ್ಕಿದ ಪರರ ನರಕವನ್ನು ಈಕ್ಷಿಸುವವನಾಗು."

+ ++ +

---

## ಬಡವರ ಬಂಧುವಿಗೆ ಈ ವರ್ಷ ವಿನಿಮಯವಾಗಿ ಬರುವ ಪತ್ರಿಕೆಗಳು.

ಬೆಂಗಳೂರು ಮಾಸಪತ್ರಿಕೆಗಳು.

ಸುಭೋದ ವಾ. ಚ. ೩-೦-೦. ವಿಕಟವಿನೋದಿನಿ ವಾ. ಚ. ೧-೮-೦. ಸರಸ್ವತಿ ವಾ. ಚ. ೩—೦—೦. ಅಧ್ಯಾತ್ಮ ಪ್ರಕಾಶ ವಾ. ಚ. ೧-೮-೦. ಕೆತೆಗಾರ ವಾ ಚ. ೧-೮-೦. ವಿಶ್ವಕರ್ಣಾಟಕ ವಾರಪತ್ರಿಕೆ ವಾ. ಚ. ೩-೮-೦. ತಾಯಿನಾಡು ದಿನಪತ್ರಿಕೆ ವಾ. ೧೨-೦-೦. ವಿನೋದ ಪ್ರಪಂಚ—ಪಕ್ಷಪತ್ರಿಕೆ ವಾ. ಚ. ರೂ. ೧-೮-೦.

ಮೈಸೂರು ಮಾಸಪತ್ರಿಕೆಗಳು.

ತಿರುಹೃದಯದ ದೂತ ವಾ. ಚ. ೧-೦-೦. ವಿವೇಕಾಭ್ಯುದಯ ವಾ. ಚ. ೧-೮-೦. ವಿಶ್ವಬಂಧು ವಾರಪತ್ರಿಕೆ ವಾ. ಚ. ೨-೮-೦.

ಶ್ರೀಕೃಷ್ಣ ಸಂದೇಶ ಪಕ್ಷಪತ್ರಿಕೆ ಉಡುಪಿ, ವಾ. ಚ. ೧--೦--೦.

ಒಂದಾಣೆಮಾಲೆ ಮಾಸಪತ್ರಿಕೆ ಬೆಳಗಾಂವಿ, ವಾ. ಚ. ೧—೮—೦.

ಭಾರತಿ ಮಾಸಪತ್ರಿಕೆ ಮೂಲ್ಕಿ ವಾ. ಚ. ೩-೦-೦.

ಸಂಯುಕ್ತ ಕರ್ಣಾಟಕ ವಾರಪತ್ರಿಕೆ ಬೆಳಗಾಂವಿ ವಾ. ಚ. ೩—೦—೦.

ತೊದಲ್ನುಡಿ ವಾರಪತ್ರಿಕೆ ಮುಂಬಾಯಿ, ವಾರ್ಷಿಕ ಚಂದಾ ೨-೮-೦.

ರಾಜಹಂಸ ವಾರಪತ್ರಿಕೆ ಧಾರವಾಡ. ವಾರ್ಷಿಕ ಚಂದಾ ೩-೦-೦.

"ದಿ ಇಂಡಿಯನ್ ಮಿರ್ರರ್" ಇಂಗ್ಲಿಷ್ ವಾರಪತ್ರಿಕೆ 28 ಬೇಂಕ್ ಸ್ಟ್ರೀಟ್, ಮುಂಬಾಯಿ ವಾ. ಚ. ೨-೮-೦.

ಕಲಾಚಂದ್ರ ಮಾಸಪತ್ರಿಕೆ ಕಾರ್ಕಳ, ವಾರ್ಷಿಕ ಚಂದಾ ೧-೪-೦.

ಕೊಡಗು ವಾರಪತ್ರಿಕೆ, ಮಡಿಕೇರಿ ವಾರ್ಷಿಕ ಚಂದಾ ೩—೮—೦.

ಮಂಗಳೂರು ವಾರಪತ್ರಿಕೆಗಳು.

ಸ್ವದೇಶಾಭಿಮಾನಿ ವಾ. ಚ. ೨—೧೩—೦. ನವಯುಗ ವಾ. ಚ. ೨--೮--೦. ರಾಷ್ಟ್ರಬಂಧು ವಾ. ಚ. ೨-೮-೦. ಕರ್ಣಾಟಕ ಕ್ರೈಸ್ತಬಂಧು. ವಾ ಚ. ೧-೪-೦. ದಿ ವಿಶಿಯನ್ ಕಾಂಞಂಗಾಡ್ ವಾ. ಚ. ೧-೪-೧.

# ಸ್ವೀಕಾರ ವಿಮರ್ಶೆ.

**ಸ್ವದೇಶಿ**—ಇಂಗ್ಲಿಷ್ ಮಾಸಪತ್ರಿಕೆ, ಮುಂಬಾಯಿಯ ಸ್ವದೇಶಿ ಲೀಗಿನಿಂದ ಹೊರಡುತ್ತಿದೆ. ವಾರ್ಷಿಕ ಚಂದಾ ಬರೇ ರೂ. ೧-೦-೦ ಮಾತ್ರ.

**Vision**—ಶ್ರೀ. ರಾಮದಾಸ ಸ್ವಾಮಿಗಳ ಸಂಪಾದಕತ್ವದಲ್ಲಿ ಹೊರಡುವ ಧರ್ಮಬೋಧನೆಯ ಉತ್ತಮ ತರದ ಮಾಸಪತ್ರಿಕೆ ವಾರ್ಷಿಕ ಚಂದಾ . . . . . . ಇಂಗ್ಲೀಷು ಬಲ್ಲವರು ಸಹಕರಿಸತಕ್ಕದ್ದು. ಕಾಂಞಗಾಡ್ ಕಾಸರಗೋಡು.

**ಲೋಕಮತ**—ವಿ. ಬಿ. ಪುರಾಣಿಕ ಬಿ. ಎ.ಯವರಿಂದ ಹುಬ್ಬಳ್ಳಿಯಲ್ಲಿ ಹೊರಡುವ ವಾರಪತ್ರಿಕೆ ವಾ. ಚ. ಅಂಚೆವೆಚ್ಚ ಸಹಿತ ರೂ. ೩-೫-೦ ಕನ್ನಡಿಗರ ಪ್ರೋತ್ಸಾಹವು ಅಗತ್ಯ.

**ಕತೆಗಾರ**—ಬೆಂಗಳೂರಿನಿಂದ ಶ್ರೀ। ಎಂ. ಎನ್. ನಾರಾಯಣ ರಾವ್ ಬಿ. ಎ. ಎಲ್. ಎಲ್. ಬಿ. ಇವರ ಸಂಪಾದಕತ್ವದಲ್ಲಿ ಹೊರಡುವ ಮಾಸಪತ್ರಿಕೆ. ಇದರಲ್ಲಿ ಒಳ್ಳೆ ನುರಿತ ಲೇಖಕರೇ ಬರೆಯುತಿದ್ದಾರೆ. ಕಥಾ ಸಂವಿಧಾನಕ್ಕೊಪ್ಪುವಂತೆ ಚಿತ್ರಗಳನ್ನು ಪ್ರಕಟಿಸುತ್ತಾರೆ. **ಕತೆಗಾರ** ಎಂಬ ಹೆಸರು ಈ ಪತ್ರಿಕೆಗೆ ಒಪ್ಪುವಂತಿದೆ. ಕನ್ನಡಿಗರ ಬೆಂಬಲವು ಮಾತ್ರ ತಪ್ಪದಿರಬೇಕು. ವಾ. ಚ. ೧—೦—೦ ಪ್ರಕಾಶಕರು:-**ಕತೆಗಾರ** ಪ್ರಕಟನಾಲಯ, ೪೯ ಚಿಕ್ಕಪೇಟೆ, ಬೆಂಗಳೂರು ಸಿಟಿ.

**ಖಾದಿಯೇ ಬಡವರ ಕಾಮಧೇನು:**--ಇದೊಂದು ಸಾಮಾಜಿಕ ನಾಟಕ. ಲೇಖಕರು:-ಶ್ರೀ ಎಂ. ಡಿ. ಆಳ್ವಾರ್ ಐಯ್ಯಂಗಾರ್ (ವಿದ್ಯಾರ್ಥಿ). ಪ್ರಕಾಶಕರು: ಶ್ರೀ. ರಾಮ ಸೇವಾ ಭಕ್ತಮಂಡಳಿ, ಮಲ್ಲೇಶ್ವರಂ ಬೆಂಗಳೂರು ೦-೨-೦. ಚಿಕ್ಕ ವಿದ್ಯಾರ್ಥಿಯೋರ್ವರ ಪ್ರಥಮ ಪ್ರಯತ್ನ, ನಾಟಕ ಬರೆಯುವ ಅಚ್ಚುಕಟ್ಟುತನ—ಭಾಷಾಶೈಲಿ—ಇವು ಒಡೆದು ಕಾಣುವಷ್ಟರ ಮಟ್ಟಿಗೆ ಮುಟ್ಟಿರದಿದ್ದರೂ, ಬಾಲ್ಯಪ್ರಯತ್ನಕ್ಕೆ ಹೊರಗಿಲ್ಲವೆಂದೇ ಹೇಳತಕ್ಕದ್ದಿದೆ. ಇದರ ಲೇಖಕರು ಈ ಪುಸ್ತಕದ ಸರ್ವ ಲಾಭವನ್ನೂ ಮೇಲಿನ ಮಂಡಲಿಗೆ ಬಿಟ್ಟು ಕೊಟ್ಟು ತನ್ನ ಔದಾರ್ಯವನ್ನು ಪ್ರಕಟಗೊಳಿಸಿರುವರು. ಇವರ ಈ ಪ್ರಯತ್ನಕ್ಕೆ ಕನ್ನಡಿಗರ ಪ್ರೋತ್ಸಾಹವು ದೊರೆತರೆ ಮುಂದಕ್ಕೆ ಈ ಲೇಖಕರಿಂದ ಸಾಹಿತ್ಯಕ್ಕೆ ಹೆಚ್ಚಿನ ಸಹಕಾರ ಸಿಗಬಹುದು.

**ಶ್ರೀ. ಪಾರ್ಶ್ವನಾಥ ತೀರ್ಥಂಕರ ಚರಿತ್ರೆ**—ಶ್ರೀ ಅನಂತಕೀರ್ತಿ ಗ್ರಂಥಮಾಲೆಯ ೩ನೆಯ ಪುಷ್ಪ. ಲೇಖಕರು ಶ್ರೀ. ಮಂಜೇಶ್ವರ ಗೋವಿಂದ ಪೈಗಳು. ಪ್ರಕಾಶಕರು: ಪ[illegible] ಮನೆ ಶ್ರೀಮತಿ ದೇಜಮ್ಮನವರು ಕಾರ್ಕಳ. ಕನ್ನಡಿಗರೆಲ್ಲ[illegible] ಓದತಕ್ಕ ಪುಸ್ತಕ. ಈ ಪುಸ್ತಕವನ್ನು ಧರ್ಮಾರ್ಥವಾಗಿ ಕೊಡಲಿರುವುದರಿಂದ ಯಾರೂ ತರಿಸಿಕೊಳ್ಳಬಹುದು. ಶಾಸ್ತ್ರದಾನ ಮಾಡಲು ಹೊರಟ ಶ್ರೀಮತಿ ದೇಜಮ್ಮನವರಿಗೆ ಶ್ರೀ. ಪರಮಾತ್ಮನು ಆಯುರಾರೋಗ್ಯೈಶ್ವರ್ಯಗಳನ್ನಿತ್ತು ಮುಂದಕ್ಕೂ ಅವರಿಂದ ಇಂತಹ ಸತ್ಸೇವೆಯನ್ನೆಸಗಿಸುತ್ತಿರಲೆಂದೇ ನಮ್ಮ ಪ್ರಾರ್ಥನೆ.

**ವಿನೋದ ಪ್ರಪಂಚ** — ಪಕ್ಷಪತ್ರಿಕೆ — ವಾರ್ಷಿಕ ಚಂದಾ ರೂ. 1-8-0. ಸಂಪಾದಕರು: ಶ್ರೀ। ತಿರುಮಲೆ ಗೋಪಾಲಾಚಾರ್ಯ ಶರ್ಮ, ಬೆಂಗಳೂರು ಸಿಟಿ.

**ಕೃಷ್ಣಾ ಬಾಯಿ:**-ಇದೊಬ್ಬ ಸಾಧ್ವಿಯ ಜೀವನ ಚರಿತ್ರೆ. ಇದು ಶ್ರೀ. ರಾಮದಾಸ ಸ್ವಾಮಿಗಳು ಇಂಗ್ಲೀಷಿನಲ್ಲಿ ಬರೆದುದರ ಕನ್ನಡಾನುವಾದ. ಅನುವಾದಕರು ಶ್ರೀ. ಕೆ. ರಘು. ಸಾಧ್ವಿ ಲಕ್ಷ್ಮಿಬಾಯಿಯವರ ಭಾವ ಚಿತ್ರವೂ ಈ ಪುಸ್ತಕದಲ್ಲಡಕವಾಗಿದೆ. ಇಂಗ್ಲೀಷಿನ ಮೂಲ ಪ್ರತಿಗೆ ಏನೂ ಕುಂದು ಬಾರದಂತೆ ಬಹು ಸೊಗಸಾಗಿ ಅನುವಾದಿಸಿರುವರು. ಸ್ತ್ರೀಯರು ಅಗತ್ಯವಾಗಿಯೂ ಓದತಕ್ಕದ್ದಿದೆ. ಪುಸ್ತಕ ಸಿಕ್ಕುವ ಸ್ಥಳ:-ಶ್ರೀ. ರಾಮದಾಸ ಸ್ವಾಮಿ. ಕಾಂಞಗಾಡ್, ಕಾಸರಗೋಡು.

**ಅಮೋಘಾಂಜನ:**-ಇದು ಎಲ್ಲಾ ತರದ ನೋವಿಗೂ, ಶೀತ, ತಲೆಶಿಡಿತ ಮುಂದಾದ ವಿಕಾರಗಳಿಗೂ ದಿವ್ಯ ಔಷಧಿ. ಇದರ ಕರ್ತೃ ಶ್ರಿ. ಸದಾರಾಮದಾಸರೆಂಬವರು. ಇದರ ಬೆಲೆ ಕರಡಿಗೆ ಒಂದಕ್ಕೆ ೦-೬-೦. ದೊರೆಯುವ ಸ್ಥಳ-ದಿ ಲಕ್ಷ್ಮ್ಯ ಟೈಲರಿಂಗ್, ಕವಾಸ್ಜಿ ಪಟೇಲ್ ಸ್ಟ್ರೀಟ್, ಫೋರ್ಟ ಮುಂಬಾಯಿ.

**ತುಳುನಾಡ್ ಪಂಚಾಂಗ**ವನ್ನೂ ಕೃತಜ್ಞತೆಯೊಡನೆ ಸ್ವೀಕರಿಸಿರುತ್ತೇವೆ. ಬೆಲೆ ೦-೧-೦. ದೊರೆಯುವ ಸ್ಥಳ, ತುಳುನಾಡ್ ಛಾಪಖಾನೆ, ರಥಬೀದಿ ಉಡುಪಿ.

ಶ್ರೀ. ಪುಂಡೂರು ಲಕ್ಷ್ಮೀ[illegible]ಯರ '**ಹರಿಜನ ಸಂಧಾನ**' [illegible] ಮುಂದಿನ ಸಂಚಿಕೆಯಲ್ಲಿ.

ನವಯುಗದ **ಪರ್ಯಾಯ ಸಂಚಿಕೆ**ಯು ಹಸ್ತಗತವಾಗಿದೆ. ಇದರಲ್ಲಿ ಈಗಿನ ಮಠಗಳ ಅಧೋಗತಿಯ ಕಾರಣಗಳನ್ನೂ ಮುಂದಿನ ಉನ್ನತಿಗೆ ಸಾಧನಗಳನ್ನೂ ತೋರಿಸಿಕೊಟ್ಟಿರುವ ಉತ್ತಮ ಲೇಖನಗಳನ್ನೇ ಪ್ರಕಟಿಸಿರುವರು. ಕಣ್ಣಾರೆ ಕಂಡ ತಪ್ಪುಗಳನ್ನೂ ತೋರಿಸಲೆಳಸದೆ, ಅವನ್ನು ಅಲ್ಲಗಳೆದು ಹೊಂಡಕ್ಕೆ ಇಳಿಯುವವರನ್ನು ಬಾವಿಗೆ ನೂಕುವ ಪತ್ರಿಕೆಯು ಇದಾಗಲಿಲ್ಲವೆಂದು ತುಂಬಾ ಸಂತೋಷದಿಂದ ಹೇಳಬಯಸುತ್ತೇವೆ. ನಿಜ [illegible]



### ಬಿಹಾರಿನಲ್ಲಿ ಭೂಕಂಪ!

ಮಾನವನು, ತಾನು ಆತ್ಮರಕ್ಷಣೆಯ ವಿಷಯದಲ್ಲಿ ತುತ್ತ ತುದಿಯನ್ನೇರಿರುವೆನೆಂದು ಹೆಮ್ಮೆ ಕೊಚ್ಚಿಕೊಳ್ಳುತ್ತಿದ್ದರೂ, ಪ್ರಕೃತಿಯ ಬರೇ ೫ ನಿಮಿಷಗಳ ಮುನಿತಕ್ಕೆ ಎದುರು ಬೀಳಲು ಸಮರ್ಥನಿಲ್ಲವೆಂದು ಪ್ರಕೃತಿಯು ಭೂಕಂಪವೆಂಬ ಭಯಂಕರ ವಿಕಾರವೊಂದರಿಂದಲೇ ಸಾರಿ ಸಾರಿ ಹೇಳುತ್ತಿದೆ. ಭೂಕಂಪವು ಬಿಹಾರನ್ನು ತನ್ನ ಕೇಂದ್ರಸ್ಥಾನವನ್ನಾಗಿರಿಸಿಕೊಂಡಿರುವುದೋ ಎಂಬಂತೆ ಆ ದೇಶವನ್ನು ತನ್ನ ಕರಾಳ ಕಾಲೊತ್ತುವಿಕೆಯಿಂದ ಅಡಿಗಡಿಗೆ ಅಧುಮಿ ಅಟ್ಟಹಾಸದಿಂದಿರುವುದನ್ನು ನೋಡುವಾಗ ಎಂತಹನ ಎದೆಯೂ ಒಮ್ಮೆಗೆ ಜುಮ್ಮೆನ್ನುವಂತಿದೆ. "ನಾವು ಸಿರಿವಂತರು, ನಮಗಾರು ಎಣೆಯಿರುವರು" ಎಂದು ಮೆರೆದಾಡುವ ಸಿರಿವಂತರಿಗೆ ಬಿಹಾರಿನಲ್ಲೂ ಕಡಿಮೆಯಿರಲಿಲ್ಲ. ಆದರೆ ಆ ಧನದೌಲತ್ತಿನ ಮಾತುಗಳೆಲ್ಲವೂ ಭೂಕಂಪಕ್ಕೆ ಬಲಿಯಾದ ಸಿರಿವಂತರಲ್ಲಿ ಈಗ ಕೇಳಬರುವಂತಿಲ್ಲ. ಶ್ರೀಮಂತಿಕೆಯ ಪರಮಾವಧಿಗೇರಿದವನೂ ಬರೇ 10 ಸೆಕೆಂಡುಗಳ ಕಾಲ ದುರುಳಾಟದಡಿಗೆ ಬಿದ್ದು ನಿರ್ಗತಿಕ–ಬಡವನಾದುದನ್ನು ನೋಡುವಾಗ, ತಾನೇ ತಾನೆಂದು ಮೆರೆದಾಡುವ ಸಿರಿವಂತರೂ, ಬಡವರನ್ನು ಕಡೆಗಣ್ಣಿನಿಂದಲೂ ನೋಡಲು ಮನಸ್ಸಿಲ್ಲದ ಐಶ್ವರ್ಯವಂತರೂ ಸ್ವಲ್ಪಕ್ಕೆ ಸ್ವಲ್ಪವಾದರೂ ತಮ್ಮ ಅಸ್ಥಿತ್ವವನ್ನು ನೆನಸಿಕೊಳ್ಳಬೇಕಾಗಿದೆ. ಅಘಟಿತ ಘಟನೆಯಿಂದಾಗಿ ವಿಪನ್ನಾವಸ್ಥೆಗಿಳಿದ ಬಿಹಾರಿನ ಜನರಿಗೆ ಕೈಲಾದಷ್ಟು ಸಹಾಯವನ್ನೀಯುವುದು ಪ್ರತಿಯೋರ್ವ ಮಾನವನ ಕರ್ತವ್ಯವಿದೆ. ಅದರಲ್ಲೂ, ನಮ್ಮ ದಕ್ಷಿಣ ಕನ್ನಡ ಜಿಲ್ಲೆಯಲ್ಲಿರುವ–ಬಡವರ ಬಂಧುಗಳೆಂದು "ಹೇಳಿಸಿ"ಕೊಳ್ಳುವ, ದೊಡ್ಡ ದೊಡ್ಡ ಹುದ್ದೆ ಅಧಿಕಾರ ಸಿಗಲು ನೀರಿನೋಪಾದಿ ಹಣ ವೆಚ್ಚ ಮಾಡುವ ಮಹಾನುಭಾವರು ಎಲ್ಲರಿಗಿಂತಲೂ ತಾವು ಮುಂದಾಗಿ ಬಂದು ಕೈಬಿಚ್ಚಬೇಕಾಗಿದೆ. ಬಡವರಿಗಾಗದ ಹಣ ಸುಡುಗಾಡ ಹೆಣವೇ ಸರಿಯೆಂಬುದನ್ನು ಮನಸ್ಸಿಗೆ ಹಚ್ಚಿಕೊಂಡು ಸಿರಿವಂತರೆಲ್ಲರೂ ಬಿಹಾರಿನ ಸಿರಿವಂತರನ್ನೊಮ್ಮೆ ನೆನಸಿ, ತಮ್ಮ ಗತಿಯೂ ಇದೇ ರೀತಿಯೆಂದರಿತುಕೊಳ್ಳಬಹುದು.

### ಬಡವರ ಬಂಧು

ಇದನ್ನು ತಿಂಗಳಿಗೊಮ್ಮೆ ಹೊರಡಿಸುವ ಬದಲಿಗೆ ೧೫ ದಿವಸಗಳಿಗೊಮ್ಮೆ ಹೊರಡಿಸಬೇಕೆಂದು ಕೆಲವು ಮಹನೀಯರು ಅಭಿಪ್ರಾಯ ಪಟ್ಟಿರುವರು. ಆದರೆ ಬಡವರ ಬಂಧುವು ಅದರ ಪೋಷಕರ, ಚಂದಾದಾರ ಬೆಂಬಲದಿಂದಲೇ ನಿಂತಿರುವುದರಿಂದ ಅವರ ಅಭಿಪ್ರಾಯವನ್ನರಿತುಕೊಳ್ಳುವುದು ನಮ್ಮ ಪ್ರಥಮ ಕಾರ್ಯ. ಆದುದರಿಂದ ಈ ವಿಷಯದಲ್ಲಿ ಬಂಧುವಿನ ಎಲ್ಲಾ ಪೋಷಕ ಚಂದಾದಾರರು ತಮ್ಮ ತಮ್ಮ ಅಭಿಮತಗಳನ್ನು ಒಂದೊಂದು ಕಾರ್ಡು ಮುಖಾಂತರ ತಿಳಿಯಪಡಿಸುವರೆಂದು ನಂಬುಗೆ.

### ಚಂದಾದಾರರಿಗೆ ಸೂಚನೆ

ಚಂದಾದಾರರ ಪೈಕಿ ಮುಂಬಾಯಿ ಚಂದಾದಾರರಿಂದ ಬರುವಷ್ಟು "ಪತ್ರಿಕೆ ಮುಟ್ಟಲಿಲ್ಲ"ವೆಂಬ ದೂರು ಮತ್ತೆಲ್ಲಿಂದಲೂ ಬರುವುದಿಲ್ಲ. ಇದಕ್ಕೆ ಕಾರಣವೆಂದರೆ, ಮುಂಬಾಯಿ ಚಂದಾದಾರರ ವಿಳಾಸಗಳು ಆಗಾಗ್ಯೆ ಬದಲಾಗುತ್ತಿರುವುದೆ! ಬದಲಾದ ವಿಳಾಸವನ್ನು ಬದಲಾದೊಡನೆ ತಿಳಿಸದೆ ಒಂದೆರಡು ತಿಂಗಳ ಬಳಿಕ ತಿಳಿಸಿದರೆ, ಕಳೆದುಹೋದ ೨ ತಿಂಗಳುಗಳ ಸಂಚಿಕೆಗಳು ವ್ಯರ್ಥವಾಗಿ ಹೋಗುವುವೆಂಬುದನ್ನು ಉದಾರಿ ಚಂದಾದಾರರು ನೆನಪಿಟ್ಟುಕೊಂಡು, ವಿಳಾಸ ಬದಲಾದೊಡನೇ ಬದಲಾವಣೆಯನ್ನು ತಿಳಿಸಬೇಕಾಗಿ ವಿನಂತಿ. ಯಾವತ್ತು ಚಂದಾದಾರರೂ ತಾವು ಪತ್ರವ್ಯವಹಾರ ನಡೆಸುವಾಗ ತಮ್ಮ ಚಂದಾ ನಂಬರನ್ನು ತಪ್ಪದೆ ಸೂಚಿಸ ತಕ್ಕದ್ದು.

### ಒಗಟು ಬಿಚ್ಚುಗರಲ್ಲಿ

ಕೆಲವು ಒಗಟು ಬಿಚ್ಚುಗರು ತಮ್ಮ ಸಂಪೂರ್ಣ ವಿಳಾಸ ಕೊಡದಿರುವುದರಿಂದ, ಕೆಲವು ಇನಾಮಿನ ಪುಸ್ತಕಗಳು ಅವರಿಗೆ ಮುಟ್ಟದೆ ಹಿಂದಕ್ಕೆ ಬಂದಿರುತ್ತವೆ. ಮುಂದಕ್ಕೆ ತಮ್ಮ ಸಂಪೂರ್ಣ ಹೆಸರು ವಿಳಾಸಗಳನ್ನು ಕೊಡಬೇಕಾಗಿ ಅರಿಕೆ.

# "ವಿಜಯ ನಗರ ಸಾಮ್ರಾಜ್ಯ ಸಂಸ್ಕೃತಿಯ ಲೇವಡಿ"

"ಧಾರವಾಡ ಕರ್ನಾಟಕ ಕಾಲೇಜಿನಲ್ಲಿ ಕರ್ನಾಟಕ ಸಂಘದ ಪರವಾಗಿ ಏರ್ಪಟ್ಟ ಸಭೆಯಲ್ಲಿ ಪಂಡಿತ ತಾರಾನಾಥರಾಯರು ಭಾಷಣ ಮಾಡುತ್ತ ವಿಜಯ ನಗರ ಸಾಮ್ರಾಜ್ಯದ ಬಗ್ಗೆ ಕುತ್ಸಿತವಾಗಿ ಅಲ್ಲದ ಸಲ್ಲದ ಟೀಕೆ ಮಾಡಿದರೆಂದು ಊರಲ್ಲಿ ತುಂಬ ಅಸಂತೋಷದ ಗಲಾಟೆ ಹಬ್ಬಿತು. ಅಲ್ಲಿಂದಿಲ್ಲಿಗೆ ಬಂದದ್ದಕ್ಕೂ ಪಂಡಿತರು ತಮ್ಮ ಪಾಂಡಿತ್ಯಕ್ಕೆ ಕಳಂಕ ತಂದುಕೊಂಡರೆಂಬುದಾಗಿ ಒಂದೆರಡು ಸ್ವರಗಳೂ ಕೇಳಿದವು. ಇಂತಹ ಮಾನ್ಯ ವ್ಯಕ್ತಿಗಳು ಇಷ್ಟು ವಿಪರೀತ ಅಪವಾದಕ್ಕೆ ಗುರಿಯಾಗುವಂತಹದಾದರೂ ಏನು ನಡೆಯಿತೆಂಬುದನ್ನು ಸಾಂಗ ಸಮಗ್ರವಾಗಿಯೂ ವಿಶ್ವಾಸನೀಯವಾಗಿಯೂ ತಿಳಿದುಕೊಳ್ಳಬೇಕೆಂದು ನಾನು ಕಾಲೇಜಿನ ಅನೇಕ ವಿದ್ಯಾರ್ಥಿಗಳನ್ನೂ ಸಭಾ ನಂತರದಲ್ಲಿ ಅವರೊಡನೆ ಚರ್ಚಿಸಿದವರನ್ನೂ ಕಂಡು ಮಾತನಾಡಿದ್ದರ ಮೇರೆಗೆ ಭಾಷಣ ಸಂಭಾಷಣಗಳು ಈ ಕೆಳಗಿನಂತಿದ್ದುವು:—

ಮೊದಲು ವಿದ್ಯಾರ್ಥಿಗಳನ್ನು ಕುರಿತು ಮಾಡಿದ ಭಾಷಣದಲ್ಲಿ ಪಂಡಿತರು ವಿಜಯ ನಗರ ಸಾಮ್ರಾಜ್ಯದ ಬಗ್ಗೆ ವಿಪರೀತ ಕಲ್ಪನೆಯಾಗುವಂತೆ ಮಾತನಾಡಿದ್ದು ನಿಜ. ಭಾಷಣವು ಆಕ್ಷೇಪಾರ್ಹವಿದ್ದಿತೆಂದೇ ಅಭಿಮಾನಿಗಳ ಮನವನ್ನು ಕದಡಿತು. ಅದರ ಪ್ರತಿಫಲವೇ ಸಭಾ ನಂತರದ ಚರ್ಚೆ. ಈ ಚರ್ಚೆಯಿಂದ ಪಂಡಿತರಿಗೆ ತಮ್ಮ ಭಾಷಣದಿಂದ ತರುಣರ ಉತ್ಸಾಹಕ್ಕೆ ಧಕ್ಕೆ ತಗಲಿತೆಂಬುದರ ಅರಿವಾಯಿತು. ಕೂಡಲೇ ವಿಜಯ ನಗರ ಸ್ಮಾರಕೋತ್ಸವಕ್ಕೆ ಸಂಪೂರ್ಣ ಸಮ್ಮತಿ ಕೊಟ್ಟರು.

ಪಂಡಿತ ತಾರಾನಾಥರು ತಮ್ಮ ಭಾಷಣವನ್ನಾರಂಭಿಸಿ 'ಕರ್ನಾಟಕ ಸಂಘದ ಪರವಾಗಿ ವ್ಯಾಖ್ಯಾನವಿರುವುದರಿಂದ ಸಂಘದ ಯುವಕರ ಕರ್ತವ್ಯದ ವಿಷಯವಾಗಿಯೇ ಮಾತನಾಡುತ್ತೇನೆ. ಬೇರೆಯವರು ಸಂಘಗಳನ್ನು ಮಾಡುವರೆಂಬುದನ್ನು ನೋಡಿ, ನಾವೂ ಒಂದು ಸಂಘವನ್ನು ಮಾಡಬೇಕೆಂಬ ಬರಿ ಅಂಧಾನುಕರಣವು ಉಪಯೋಗದ್ದಲ್ಲ. ಯಾವ ಕಾರ್ಯಕ್ಕಾದರೂ ಬಹಿಶ್ಶಕ್ತಿ ಅಂತಶ್ಶಕ್ತಿಗಳೆರಡೂ ಬೇಕು. ಸಂಘ, ಧನ ಮುಂತಾದವುಗಳು ಬಾಹ್ಯೋಪಕರಣಗಳು, ಇವು ಬೇಡವೆಂದಲ್ಲ; ಆದರೆ ಬರೀ ಇವುಗಳಿಂದ ಏನೂ ಆಗದು. ಪ್ರತಿಯೊಂದು ವ್ಯಕ್ತಿಯೂ ತನ್ನ ಅಂತಶ್ಶಕ್ತಿಯನ್ನು ಕಂಡುಕೊಳ್ಳುವುದು ಮುಖ್ಯ. ಬಳಿಕ ಅದರ ಅಭಿವೃದ್ಧಿಗೆ ಪ್ರಯತ್ನ ಮಾಡಬೇಕು. ವ್ಯಕ್ತಿಯಂತೆಯೇ ಪ್ರತಿ ಜನಾಂಗಕ್ಕೂ ಒಂದು ವಿಶಿಷ್ಟ ಅಂತಶ್ಶಕ್ತಿಯಿರುತ್ತದೆ. ಅದು ಅದರ ಸಮಷ್ಟಿ ಜೀವನದಲ್ಲಿರುತ್ತದೆ. ಈ ಸಮಷ್ಟಿ ಜೀವನವು ಅಲ್ಲಿಯ ಪರಿಸ್ಥಿತಿ ವಾತಾವರಣಗಳ ಮೇಲೆ ರೂಪುಗೊಂಡಿರುತ್ತದೆ. ಕರ್ನಾಟಕದ ಇಂತಹ ಸಮಷ್ಟಿ ಜೀವನವು ಯಾತರಲ್ಲಿದೆ ಎಂಬುದನ್ನು ಕಂಡುಕೊಳ್ಳುವುದು ಈಗಿನ ಯುವಕರ ಕರ್ತವ್ಯ. ಆ ವೈಶಿಷ್ಟ್ಯದ ತಳಹದಿಯ ಮೇಲೆ ನೀವು ಇಂದಿನ ವೈಭವವನ್ನು ಕಟ್ಟಬೇಕು. ಅದನ್ನು ಬಿಟ್ಟು ಬರೀ ಹಿಂದಿನ ವೈಭವವು ಹಾಗಿತ್ತು ಹೀಗಿತ್ತು ಎಂದು ಅಭಿಮಾನ ಪಡುತ್ತ ಕೂಡುವುದರಲ್ಲಿ ಏನೂ ಅರ್ಥವಿಲ್ಲ. ಗತವೈಭವವು ಗುರಿಯಾಗಬೇಕೋ ಗೋರಿಯಾಗಬೇಕೊ ಇದೊಂದು ಸಮಸ್ಯೆ.

ನನ್ನ ಸ್ನೇಹಿತರೊಬ್ಬರು "ವಿಜಯ ನಗರದ ಸ್ಮಾರಕೋತ್ಸವದ ವಿಷಯಕ್ಕೆ ನಿಮಗೆ ಆಮಂತ್ರಣ ಬಂದಿದೆಯೊ? ಅದರಲ್ಲಿ ನೀವು ಯಾವ ರೀತಿಯಲ್ಲಿ ಕೆಲಸ ಮಾಡುವಿರಿ? ಎಂದು ನನ್ನನ್ನು ಕೇಳಿದರು. ಒಂದೇಕೆ, ಎರಡು ಆಮಂತ್ರಣಗಳು ಬಂದಿವೆ. ಆದರೆ ಆ ವಿಜಯ ನಗರದಲ್ಲಿ ಅಭಿಮಾನ ಪಡತಕ್ಕಂಥ ಯಾವ ಸ್ಮಾರಕಗಳಿವೆ? ವಿದ್ಯಾರಣ್ಯರು ಪಂಚದಶಿಯೆಂಬ ದೊಡ್ಡ ಗ್ರಂಥವನ್ನು ಬರೆದಿದ್ದಾರೆ. ಪಾಶ್ಚಿಮಾತ್ಯರೂ ಅದನ್ನು ತಲೆಯ ಮೇಲಿಟ್ಟುಕೊಂಡು ಕುಣಿಯುತ್ತಾರೆ. ಆ ವಿದ್ಯಾರಣ್ಯರೊಬ್ಬರಿಗೆ ನನ್ನ ನಮಸ್ಕಾರ. ನಾನು ಒಂದಲ್ಲ ಎರಡಲ್ಲ ಇಪ್ಪತ್ತು ಸಲ ಹಂಪೆಯಲ್ಲಿ ಹೋಗಿದ್ದೇನೆ. ಎಲ್ಲಿ ನೋಡಿದರಲ್ಲಿ ಗುಡಿ ಗೋಪುರಗಳೇ ಹೊರತು, ಸಂಸ್ಕೃತಿಯ ಊರ್ಜಿತ ಸ್ಥಿತಿಯನ್ನು ಹೊಂದಿದ ಒಂದಾದರೂ ಸ್ಮಾರಕವಿಲ್ಲ. ಸಂಸ್ಕೃತಿ ಒಳ್ಳೇ ಊರ್ಧ್ವಮುಖಿಯಾಗಿತ್ತೆಂಬುದಕ್ಕೆ ಮುಖ್ಯವಾಗಿ ಆ ರಾಜ್ಯದಲ್ಲಿ ವಿದ್ಯಾಭಿವೃದ್ಧಿ, ಪರೋಪಕಾರ, ಅನಾಥರುದ್ಧಾರ, ರೋಗಿಸೇವೆ ಮೊದಲಾದ ಕೆಲಸಗಳನ್ನು ತನ್ನ ಘನತೆಗೆ ತಕ್ಕಂತೆ ಮಾಡಿರಬೇಕು. ಇಂತಹ ಒಂದಾದರೂ ಕುರುಹು ಹಂಪೆಯಲ್ಲಿಲ್ಲ. ಒಂದು ವಿಶ್ವ ವಿದ್ಯಾಲಯದ ಬುನಾದಿಯನ್ನು ತೋರಿಸಬಲ್ಲಿರಾ? ಒಂದು ಅನಾಥಾಲಯದ ಅವಶೇಷವನ್ನು ತೋರಿಸಬಲ್ಲಿರಾ? ಒಂದು ಔಷಧಾಲಯದ ಕುರುಹು ಇಲ್ಲ. ಆ ರಾಜ್ಯಕ್ಕೆ ಒಪ್ಪುವ ಪ್ರಮಾಣದಲ್ಲಿ ವಿಜ್ಞಾನಿಗಳನ್ನೂ ಗಣಿತಜ್ಞರನ್ನೂ ಹುಟ್ಟಿಸಿರುವುದೆ! ಸಾಸಿವೆ ಕಾಳುಗಣಪ್ಪನನ್ನು ಕಟೆದೆ, ಕಡಲೇಕಾಳು ಗಣಪ್ಪನನ್ನು ಕಟೆದೆ, ಅವರೆಕಾಳು ಗಣಪ್ಪ—ತೆಂಗಿನಕಾಯಿ ಗಣಪ್ಪಗಳನ್ನು ಕಟೆದೆ. ಗುಡಿ ಗೋಪುರ ಕಟ್ಟಿದೆ. ಇದಕ್ಕೂ ಹೆಚ್ಚೆಂದರೆ ಎರಡು ಮೈಲುದ್ದ ಸೂಳೇ ಬಜಾರ! ಇನ್ನು ಕೆಲವು ಕುರುಹುಗಳೆಂದರೆ ಯಾವನಾದರೂ ರಾಜ ಸತ್ತರೆ ಅವನ ಮೋಕ್ಷಕ್ಕಾಗಿ ಪ್ರಾಣ ನೀಗಿದ ಅವನ ಹೆಂಡಿರ ಸ್ಮಾರಕಗಳು! ಒಂದು ಕಡೆಯಂತೂ ಒಬ್ಬನು ಸತ್ತರೆ ಅವನ ಹೆಂಡಿರು, ಮಕ್ಕಳು, ಆಳು ಹೋಳು, ನಾಯಿ, ಬೆಕ್ಕು ಇಲಿಗಳು ಎಲ್ಲವೂ ಸಹಗಮನ ಮಾಡಿದ ಕುರುಹುಗಳುಂಟು! ಮತ್ತೊಬ್ಬ ಪ್ರಸಿದ್ಧ ಪುರುಷ ಹುಟ್ಟಿದನೆಂದರೆ ತೆನ್ನಾಲಿ ರಾಮಕೃಷ್ಣ. ಹೋಗಲಿ. ಅವನಲ್ಲಿ ಏನಿರದಿದ್ದರೂ ಹಾಸ್ಯವಾದರೂ ಇತ್ತು. ಅದೂ ಒಂದು ಜೀವನದ ಲಕ್ಷಣ

ಎಂದುಕೊಂಡರೆ ಅಂಥ ಇನ್ನೊಬ್ಬನ ಹೆಸರುಂಟೆ?''

"ಮುಖ್ಯವಾಗಿ ವೈಭವವು ವರ್ತಮಾನ ಕಾಲದಲ್ಲಿರಬೇಕು. ಅದನ್ನು ತರುಣರು ಕಟ್ಟಬೇಕು. ಇಂದು ಪರರಾಷ್ಟ್ರೀಯನೊಬ್ಬನು ಬಂದು ಕರ್ಣಾಟಕದ ವೈಭವವೆಲ್ಲಿದೆಯೆಂದು ಕೇಳಿದರೆ ಅವನಿಗೆ ಹಂಪೆಯ ಎಡ್ರೆಸ್ ಕೊಡುತ್ತೀರಾ? ಹೀಗೆ ಕೇಳಿಸಿಕೊಂಡ ಕನ್ನಡಿಗನ ಮೋರೆಯ ಮೇಲೆಯೇ ಆ ವೈಭವ ಕಾಣಬೇಕು. ಆದುದರಿಂದ ಮುಖ್ಯವಾಗಿ ನೀವು ಕರ್ಣಾಟಕದ ವೈಶಿಷ್ಟ್ಯದ ತಿರುಳು ಹುಡುಕಿಕೊಳ್ಳುವುದೇ ಮೊದಲಿನ ಕೆಲಸ. ಅದರ ಆಧಾರದ ಮೇಲೆ ಹಿಂದಿನ ವೈಭವವನ್ನು ಇಂದು ಮಾಡಿ ತೋರಿಸಬೇಕು. ಒಟ್ಟಿನಲ್ಲಿ ಸಾರಾಂಶವೆಂದರೆ, ಸಂಸ್ಕೃತಿಯು ಹಿಂದೆ ಇದ್ದಿಲ್ಲ—ಅದನ್ನು ಕಟ್ಟುವವರು ನೀವು''

ಅವರ ಭಾಷಣ ಮುಗಿಯಲು ಪ್ರೊ. ಜಹಾಗಿರದಾರರು ಪಂಡಿತರ ಆಭಾರ ಮನ್ನಿಸುವಾಗ್ಗೆ, "ಇಂದು ಯಾರಾದರೂ ಕರ್ಣಾಟಕ ವೈಭವವೆಲ್ಲಿದೆ ಎಂದು ಕೇಳಿದರೆ "ಹಂಪೆಯ ಎಡ್ರೆಸ್ ಕೊಡುವುದಿಲ್ಲ; ತುಂಗಭದ್ರೆಯ ಎಡ್ರೆಸ್ ಕೊಡುತ್ತೇವೆ. ಹಿಂದೆ ಏನಿದ್ದರೂ ಇರಬಹುದು. ತಾರಾನಾಥರಂತಹ ದೊಡ್ಡ ವಿಭೂತಿ ಮಾತ್ರ ಇದ್ದಿದ್ದಿಲ್ಲ. ಇದು ನಮಗೆಲ್ಲ ಸಮಾಧಾನ'' ಎಂದರು.

ಭಾಷಣವಾದ ಮೇಲೆ ವಿದ್ಯಾರ್ಥಿಗಳು ತಾರಾನಾಥರೊಂದಿಗೆ ವಾದ ಮಾಡ ಬಯಸಿದರು. ಪಂಡಿತರಿಗೆ ಕೊಂಚ ತಬ್ಬಿಬ್ಬಾಯಿತು. ಇಷ್ಟನ್ನವರು ನಿರೀಕ್ಷಿಸಲಿಲ್ಲವೆಂದು ಕಾಣುತ್ತದೆ. ವಿದ್ಯಾರ್ಥಿಗಳೊಬ್ಬರು "ಹೀಗೆ ವಿಧ್ವಂಸಕ ಭಾಷಣಗಳಿಂದೇನು ಪ್ರಯೋಜನ? ರಚನಾತ್ಮಕವಾದ ಸಲಹೆಗಳನ್ನು ಮಾಡಬಾರದೆ?'' ಅನ್ನಲು "ಅವರು ರಚನಾತ್ಮಕವಾಗಿ ಮಾಡಿದ್ದಾದರೂ ಏನು?'' ಎಂಬ ಉತ್ತರ ಬಂತು. ಪಂಡಿತರ ಬಾಯಿಯಿಂದ ಮುಂದೆ ಇನ್ನೂ ಕೆಲವು ಪ್ರಶ್ನೋತ್ತರಗಳಾದುವು. ಆ ವೈಖರಿಯನ್ನು ಕೊಂಚ ನೋಡಿ:-

ಪ್ರ:-ಮುಸಲ್ಮಾನರ ಭಯಂಕರ ದಾಳಿಯನ್ನು ತಡೆದು ಭಾರತೀಯ ಸಂಸ್ಕೃತಿಯ ಸಂರಕ್ಷಣೆಯನ್ನು ಮಾಡಿದ ಕೀರ್ತಿಯು ವಿಜಯನಗರಕ್ಕೆ ಹೋಗುವುದಿಲ್ಲವೆ?

ಉ:-ಮುಸುಲ್ಮಾನರನ್ನು ಹೊರಗೆ ಪೂರಾ ಹೊರಗೆ ಹಾಕಿತೊ?

ಪ್ರ:-ಕೈಲಾದ ಮಟ್ಟಿಗೆ ಹಿಂದೂತ್ವವನ್ನು ಕಾಯ್ದುಕೊಂಡಿತು.

ಈ ಪ್ಲೇಟ್‌ಫೋರ್ಮ್‌ನಲ್ಲಿ ನಿಮ್ಮದೊಂದು ವ್ಯಾಖ್ಯಾನವಾಗಿ ಹೋಗಲಿ!

ಉ:-ನಾನು ವ್ಯಾಖ್ಯಾನ ಕೊಡಲಿಕ್ಕೆ ಬಂದಿಲ್ಲ.

ಪ್ರ:-ಸೊಳೆಗೇರಿ ಎರಡು ಮೈಲುದ್ದವೆಂದಿರಲ್ಲ.

ನಿಮ್ಮ ಅತಿಶಯೋಕ್ತಿಗೂ ಒಂದು ಮೇರೆ ಬೇಡವೆ?

ಪಂಡಿತರೇಕೋ ಉತ್ತರ ಕೊಡಲಿಲ್ಲ!

ಪ್ರ:—ವಿಜಯನಗರ ಸ್ಮಾರಕೋತ್ಸವ ಮಾಡ ಬಯಸುವವರೆಲ್ಲ ಮುಟ್ಠಾಳರಲ್ಲವೆ?

ಉತ್ತರವಿಲ್ಲ. ಆಗ ಹಿರಿಯರೊಬ್ಬರೆದ್ದು "ಶಿಲ್ಪಕಲಾ ಪೂರ್ಣವಾದ ವಿಠಲನ ಗುಡಿ ನೋಡಿ. ಅಲ್ಲಿಯ ಸಪ್ತಸ್ವರ ಸ್ತಂಭಗಳನ್ನು ನೋಡಿ'' ಅಂದರು, ಪಂಡಿತರಾಗ" ನಿಮಗೆ ಸ್ವರಶಾಸ್ತ್ರ ಗೊತ್ತೊ?'' ಎಂದು ಟಾಂಗಾ ಶಬ್ದ ಮಾಡಹತ್ತಿದರು!

ಪ್ರ:-ವಿದ್ಯಾರಣ್ಯ ಸಯಣಾಚಾರ್ಯರ ಕೆಲಸವನ್ನಿಷ್ಟು ಸಣ್ಣಗೆ ಕಾಣುವಿರಲ್ಲ?

ಉ:-ಅವರಿಬ್ಬರೂ ಗ್ರಂಥಕರ್ತರು. ಇನ್ನೇನು ಹೇಳಬೇಕು?

ಪ್ರ:—ನೀವು ಕರ್ಣಾಟಕ ಸಂಘಕ್ಕೆ ಏನು ಸಂದೇಶ ಕೊಟ್ಟಂತಾಯಿತು?

ಉ:—ನನಗೇ ಗೊತ್ತಿಲ್ಲ.

ಪ್ರ:-ಬಲ್ಲವರೆಂದಷ್ಟೆ ನಿಮ್ಮನ್ನಿಲ್ಲಿಗೆ ಆಹ್ವಾನಿಸಿದ್ದು.

ಹೀಗೆ ನಡೆದಿರಲು ಪ್ರೊಫೆಸರೊಬ್ಬರು "ತಾರಾನಾಥರಂದಂತೆ ವಿಜಯನಗರವಿದ್ದಿಲ್ಲ, ಹೌದಲ್ಲೊ. ಹಾಗೆ ಆಗಲಿ, ಚಲೋ ಆಯ್ತಲ್ಲ!'' ಎಂದುಬಿಟ್ಟರು. ಈ 'ಫಜೀತಿ' ನೋಡಿ ಪಂಡಿತರಿಗೆ ಕೊಂಚ ಕಂಕಮುಕ ಹಿಡಿಯಿತೆಂದು ಕಾಣುತ್ತದೆ. ಮತ್ತೆ ಯಾರೋ "ಸ್ಮಾರಕೋತ್ಸವ ನಡೆಸುವ ಬಗ್ಗೆ ತಮ್ಮ ಮತವೇನು?'' ಅನ್ನಲು ಪಂಡಿತರು 'ಅಬ್ಬ ಬದುಕಿದೆ' ಅಂದಂತೆ "ಸೆಂಟ್ ಪರ್ಸೆಂಟ್ ಮಾಡಬೇಕು! ಏನಾದರೂ ಶಾಶ್ವತ ಕಾರ್ಯ ಮಾಡಬೇಕು'' ಅಂದರು'' ಎಂದು ವಿಶ್ವ ಕರ್ಣಾಟದಲ್ಲೊಂದು ಲೇಖನ.

ಶ್ರೀ. ಪಂಡಿತ ತಾರಾನಾಥರು ಸೆಂಟ್ ಪರ್ಸೆಂಟ್ ಸರಿಯೆಂದೇ ನಮ್ಮ ಭಾವನೆ. ವಿಜಯ ನಗರ ಸಾಮ್ರಾಜ್ಯ ಸ್ಮಾರಕೋತ್ಸವಕ್ಕಾಗಿ 1931ರಿಂದಲೇ ಕನ್ನಡಿಗರಲ್ಲಿ ಚಳವಳವೆದ್ದಿದೆ. ಹಿಂದೂ, ಕರ್ನಾಟಕ ವೈಭವ, ಕರ್ನಾಟಕ ಧುರೀಣ, ಕರ್ಮವೀರ, ಭಾರತಿ, ಸ್ವದೇಶಾಭಿಮಾನಿ ಪತ್ರಿಕೆಗಳಲ್ಲಿ ಈ ಬಗ್ಗೆ ಲೇಖನಗಳ ಸಮೂಹವೇ ಪ್ರಕಟವಾಗಿ ಈ ಬಗ್ಗೆ ಒಂದು ಲಕ್ಷ ರೂಪಾಯಿಗಳನ್ನು ಸಂಗ್ರಹಿಸಬೇಕೆಂದು ನಿರ್ಧಾರವಾಗಿರುವುದೂ ಎಲ್ಲರಿಗೂ ತಿಳಿದಿದೆ. 1931ರ ನಾಡ ಹಬ್ಬದಲ್ಲೂ ಇದನ್ನು ಸಮರ್ಥಿಸಿ ಕೆಲಸಕ್ಕಾರಂಭಿಸಬೇಕೆಂದು ನಿಶ್ಚೈಸಿದ್ದರು. ಶ್ರೀ. ಪ್ರಲ್ಹಾದ ನಾರಾಯಣ ಬೆಂಗೇರಿಯವರು ಹಲವು ಲೇಖನಗಳನ್ನು ಪ್ರಕಟಿಸಿ ದುಡಿದಿದ್ದಾರೆ. ಆದರೂ ಇವರ ರಥವು ಮುಂದರಿದಿರುವುದಿಲ್ಲ.

ದುಡ್ಡಿನ ತುಟ್ಟಿಯ ವೇಳೆ ಹಳೆಯ ಸ್ಮಾರಕಗಳಿಗಾಗಿ ಲಕ್ಷಗಟ್ಟಳೆ ವ್ಯಯಿಸಬೇಕೆಂದು ಕನ್ನಡಿಗರು ಟೊಂಕಕಟ್ಟಿರುವುದನ್ನು ನೋಡಿ ಪಂಡಿತ ತಾರಾನಾಥರು ಮರುಗಿದುದು ಸಮಂಜಸವಾಗಿದೆ. ಧಾರವಾಡದ ಕೆಲವರು ತಾರಾನಾಥರಿಗೆ ಲೇವಡಿ ಹಾಕಿದುದು ಎಷ್ಟಕ್ಕೂ ಸದ್ವರ್ತನವಲ್ಲ. ಅಜ್ಜ ನಟ್ಟ ಗೋಳಿ ಮರದ ಗಾದೆಯು ಪರಿಪೂರ್ಣವಾಗುವುದಾದರೆ, ಅದು ವಿಜಯ ನಗರ ಸ್ಮಾರಕೋತ್ಸವದಿಂದಲೇ ಆಗಿ ಲೋಕಕ್ಕೆ ತಿಳಿಯಬೇಕು. ದಾರಿದ್ರ್ಯದಿಂದಲೋ ಭೂಕಂಪದಿಂದಲೋ ಬಳಲಿರುವ ಬಡವರಿಗಾಗಿ ಅಥವಾ ಕನ್ನಡಿಗರಿಗೆ ಪ್ರಾಮುಖ್ಯವಿರುವ ಕನ್ನಡ ವಾಙ್ಮಯ ಸೇವೆಗಾಗಿ ಹಂಚಿಕೆಗಳನ್ನು ಹೂಡುವುದರಲ್ಲೋ ಹಣ ವೆಚ್ಚ ಮಾಡದೆ, ಈ ರೀತಿಯ ಪುರಾತನ ಗೋರಿಯ ಆರಾಧನೆಗೆ ಕನ್ನಡಿಗರು ಸಿದ್ಧರಿರುವುದು ಕೇವಲ ಹಾಸ್ಯಾಸ್ಪದವೇ ಸರಿ. **ಮ. ಜಾ.**




ಬೆಲ್ಲರೆಟ್ ಎಂಬಲ್ಲಿ ಒಬ್ಬ ಸ್ತ್ರೀಯು ೧೧ನೇ ವಯಸ್ಸಿನಲ್ಲಿ ಮದುವೆಯಾದಳು. ೧೩ರಲ್ಲಿ ಗಂಡನನ್ನು ಬಿಟ್ಟಳು. ೧೪ರಲ್ಲಿ ಪುನಹ ವಿವಾಹವಾದಳು. ೧೬ರಲ್ಲಿ ವಿಧವೆಯಾದಳು. ೧೭ರಲ್ಲಿ ತಿರುಗಿ ಮದುವೆಯಾದಳು. ೧೮ರಲ್ಲಿ ಗಂಡನು ಅವಳನ್ನು ಬಿಟ್ಟೋಡಿದನು. ೧೯ರಲ್ಲಿ ಅವಳಿಗೆ ಪ್ರಣಯ ನಿರಾಶೆಯಾಯಿತು. ಜೀವನದಲ್ಲೇ ಸಾರವಿರಲೆಂದು ಆತ್ಮಹತ್ಯ ಮಾಡಿಕೊಂಡಳು.

ಮೆಡೀರ ಎಂಬಲ್ಲಿಂದ ಜಲಬೇಡವೊಂದು ಲಂಡನಿನ ಪ್ರಾಣಿಸಂಗ್ರಹಾಲಯಕ್ಕೆ ತರಲ್ಪಟ್ಟಿರುವುದು. ಈ ಪ್ರಾಣಿಯು ಬೇಡನಂತೆಯೇ ತನ್ನ ಶರೀರದಿಂದ ದಾರವನ್ನೆಸೆದು ಚಿಕ ಮೀನುಗಳನ್ನು ಅದರಿಂದ ಬಂಧಿಸಿ ತಿನ್ನುವುದು.

ಸಿಸಿಲಿಯ ಮೆಸೀನ ಎಂಬಲ್ಲಿ ದೊಡ್ಡ ಗಡಿಯಾರವೊಂದರಲ್ಲಿ ೧೨ ಅಡಿ ಎತ್ತರದ ಕಂಚಿನ ಸಿಂಹ ಮತ್ತು ೬ ಅಡಿ ಎತ್ತರದ ಕೋಳಿಗಳಿರುವುವು. ಸರಿ ಮಧ್ಯಾಹ್ನವಾದೊಡನೆಯೇ ಸಿಂಹವು ಗರ್ಜಿಸುವುದು. ಸೂರ್ಯೋದಯವಾದೊಡನೆ ಕೋಳಿ ಕೂಗುವುದು.

ಕೇವಲ ೩೦ ವರ್ಷಗಳ ದೂರದ ಟೊರ್ಕೈನ್ ಎಂಬಲ್ಲಿಂದ ಎಕ್ಸಿಟರ್ ಎಂಬಲ್ಲಿಯ ವಿಳಾಸಕ್ಕೆ ತಾರೀಕು ೨೪-೭-೧೯೧೪ರಲ್ಲಿ ಟಪ್ಪಾಲಿಗೆ ಹಾಕಿದ ಪೋಸ್ಟು ಕಾರ್ಡು ಈಗತಾನೆ ಹೋಗಿ ಮುಟ್ಟಿರುವುದು. ೧೦ ವರ್ಷಗಳ ತನಕ ಅದೇನು ಮಾಡುತ್ತಿದ್ದಿತೆಂದು ತಿಳಿದುಬಂದಿಲ್ಲ.

ನ್ಯೂಯೋರ್ಕಿನ ಜೇಮ್ಸ್ ಕೆರೋಲ್ ಎಂಬವನು ತನ್ನ ಪತ್ನಿಯು ಸತ್ತಳೆಂದು ಸುಳ್ಳು ನೋಟೀಸನ್ನು ಪತ್ರಿಕೆಯಲ್ಲಿ ಪ್ರಕಟಿಸಿ ಖಟ್ಲೆಗೊಳಗಾಗಿರುವನು. ಅವನು ಕೋರ್ಟಿನಲ್ಲಿ ಅಪರಾಧವನ್ನೊಪ್ಪಿ, ತನ್ನ ಪತ್ನಿಯ ಸಂಬಂಧಿಕರು ಅದನ್ನು ನೋಡಿ ಮನೆಗೆ ಬರುವುದನ್ನು ನಿಲ್ಲಿಸುವರೆಂಬ ಆಶೆಯಿಂದ ತಾನು ಹಾಗೆ ಮಾಡಿದುದೆಂದು ಹೇಳಿರುವನು.

ರುಮಾನಿ ದೇಶದ ಗಲಾಚಿ ಎಂಬಲ್ಲಿ ಇಬ್ಬರು ಅವಿವಾಹಿತೆಯರು ತಮ್ಮ ಮನೆಯಲ್ಲಿ ಹಲವು ಬೆಕ್ಕುಗಳನ್ನು ಸಾಕಿದ ಅಪರಾಧಕ್ಕಾಗಿ ಶಿಕ್ಷೆಗೊಳಗಾಗಿರುವರು. ಪೋಲೀಸರು ಬೆಕ್ಕುಗಳನ್ನು ನಾಶಮಾಡಬೇಕೆಂದು ತಿಳಿಸಲು ಅವರ ಮನೆಗೆ ಹೋಗಿ ನೋಡಿದಾಗ ೧೫೦ ಬೆಕ್ಕುಗಳಿದ್ದುವು.

ವಿಯನ್ನದ ೪೫ ವರ್ಷದ ಹೆಂಗಸೊಬ್ಬಳಿಗೆ ೨೯ನೇ ಮಗುವೊಂದು ಈಗ ತಾನೆ ಹುಟ್ಟಿರುವುದು. ಲೋಕದಲ್ಲಿ ಇಷ್ಟು ಮಕ್ಕಳುಳ್ಳ ದಂಪತಿಗಳೇ ಇಲ್ಲೆಂದು ತಿಳಿದು ಬರುತ್ತದೆ. ಈ ಮಕ್ಕಳಲ್ಲಿ ೨೩ ಹುಡುಗರು ೬ ಹುಡುಗಿಯರು. ಇವಳು ತನ್ನ ೧೯ನೇ ವಯಸ್ಸಿನಲ್ಲಿ ತನ್ನ ಮೊದಲನೆ ಮಗು ಹೆತ್ತಳು. ಒಮ್ಮೆ ಮಾತ್ರ ಅವಳಿ ಜವಳಿ ಮಕ್ಕಳನ್ನು ಹೆತ್ತಿದ್ದಳು. ಎರಡನೇ ಸ್ಥಾನವೂ ವಿಯನ್ನಕ್ಕೆ ಹೋಗುವುದು. ಅಲ್ಲಿಯ ಇನ್ನೊಬ್ಬ ಸ್ತ್ರೀಯು ತನ್ನ ೨೬ನೇ ಮಗುವನ್ನು ಹೆತ್ತಿರುವಳು.

ವಾರ್ಸೋ ಪಟ್ಟಣದಲ್ಲಿ ಒಬ್ಬಳು ೩೪ ಸಲ ಮದುವೆಯಾಗಿದ್ದನು. ೩೫ನೇ ಸಲ ಮದುವೆಮಾಡಿಕೊಳ್ಳುವುದರಲ್ಲಿರುವಾಗ ಅಷ್ಟು ಹೆಚ್ಚು ಸಲ ಮದುವೆ ಮಾಡಿಕೊಂಡ ಅಪರಾಧಕ್ಕಾಗಿ ಕೈದು ಮಾಡಲ್ಪಟ್ಟಿರುವರು.

ಸ್ವೀಡನ್ ದೇಶದ ವಾರ್ನೋ ಪಟ್ಟಣದಲ್ಲಿ ೩೩ ವರ್ಷದವನೊಬ್ಬನು ಸ್ತ್ರೀ ಡಾಕ್ಟರರೊಬ್ಬಳ ಡಿಪ್ಲೊಮವನ್ನು ಕದ್ದು ತಾನು ಸ್ತ್ರೀವೇಶ ಧರಿಸಿ ಸ್ತ್ರೀ ಡಾಕ್ಟರನೆಂದು ಚಿಕಿತ್ಸೆ ನಡೆಸುತ್ತಿದ್ದನು. ಇದು ಪೋಲೀಸರಿಗೆ ತಿಳಿದು ಅವನ ಮೇಲೆ ಖಟ್ಲೆ ನಡೆದು ೪ ವರ್ಷ ಶಿಕ್ಷೆಗೆ ಗುರಿ ಮಾಡಲಾಯಿತು.

M. R. Ry. Kanemar Venkappayya Avl.,
Proprietor, Welcome Hotel,
Fort Bombay. Rs. 50—0—0

M. R. Ry. K. M. Gaithonde Avl.,
Cheif Agent Popular Insurance Co., Ltd.
Kararwal Bld. Lohar Chal,
Bombay. Rs. 10—0—0

M. R. Ry. N. S. Bangera Avl., 116 Proctor
House, Proctor Road, Bombay Rs. 10-0-0

M. R. Ry. M. B. Amin Avl., Empire
Automobiles New Queens' Road,
Bombay 4. Rs. 10—0—0

M.R. Ry. U. K. Kadbet Avl., Bohra Bazar,
Fort Bombay. Rs. 10—0—0

M. R. Ry. H. S. Mandon Avl.,
Parel, Bombay. Rs. 10—0—0

M. R. Ry. N. P. Bolar Avl., 22 Apollo
street, Fort Bombay. Rs. 10—0—0

M. R. Ry. K. Sundar Amin Avl.
22 Police Court Lane, Top Floor,
Fort Bombay. Rs. 10—0—0

M. R. Ry. N. B. Amin Avl, 22 Police Court
Lane, Top Floor, Fort Bombay Rs. 10—0—0

M. R. Ry. M. Sampath Rao, Avl., 48 Mint
Road, Fort Bombay. Rs. 5—0—0

M. R. Ry. B. K. Saliar Avl, Fulawar Hair
Dressing Saloon, Gunbow Street,
Fort Bombay.

M. R. Ry. Bhasker Kotenkar, Avl., C/o
Havero Trading Co., Ltd. P. O. Box,
No. 37 Bombay.

M. R. Ry. Ranga Rao, Avl., 40 Medows
Street, Fort Bombay.

M. R. Ry. Birmana S. Kirodian, Avl., Co/
M/S Strasess & Co., Ltd. P. O. Box, 444
Fort Bombay.

M. R. Ry. Jarappa P. Saliyan Avl., C/o Bank of
Toiwan Ltd, Churchgate Street, Bombay.

M. R. Ry. Permude Dasappa Bangera Avl.,
C/o Central Bank of India, Ltd.,
Fort Bombay.

M. R. Ry. B. S. Amin Avl., C/o Messers,
Volkart Bros's Import Dept, Bombay.

M. R. Ry. Venkappa Kotian Avl., 9 a Police
Court Lane, Fort Bombay.

M. R. Ry., S. G. Mallya Avl., New Hindhu
Restaurant, 82 Gogha Street, Fort Bombay.

M. R. Ry. B. G. Mendon Avl.,
Valkeswar Road, Bombay.

M. R. Ry. S. S. Karanth Avl.,
C/o Messrs. Kochikar Bros., Udipi.

M. R. Ry. I. Babu, Avl.,
Teacher, Surathkal.

M. R. Ry. M. T. Mendon Avl.,
Valkeswar Road, Bombay.

M. R. Ry. Munjunath B. Amin Avl., 22 Police
Court Lane, Top Floor, Fort Bombay.

M. R. Ry. B. Manjunath Avl., Proprietor, City
Cycle Co., Mangalore.

M. R. Ry. K. A. Kotian Avl., Co/ O. S. K.
Taj Building P. O. Box, No. 355
Hornby Road, Fort Bombay.

M. R. Ry. A. Sankappa Avl., Tailor & Out
fitter, A. R. Dias & Bros, Esplanade
Road, Bombay.

M. R. Ry. M. Ishwar Avl. Photographer
Savoy Chambers, 2nd floor, Dalal Street,
Fort Bombay.

M. R. Ry. M. Anantha Paradeshi Avl.,
C/o The Indian Cement Co, Ltd., 24
Bruce Street, Fort Bombay.

Messers. M. P. Sanil & Brothers (of moolky)
1st floor, House No. 209
Bohra Bazar Street, Fort Bombay.

Dr. M. Rayappa Kamath L. M. P.
Registered Medical Practitioner,
P. O. Moolki.

---

## ಕಳೆದ ಜನವರಿಯು ಒಗಟನ್ನು ಬಿಚ್ಚಿದ ಮಹನೀಯರು.

೧. ಕೆ ಜಗೇಶ ಚಂದ್ರ ಹೆಗ್ಡೆ, ಬೋರ್ಡ್ಡ ಎಲಿಮೆಂಟರಿ ಸ್ಕೂಲ್ ಮುಲ್ಕಿ. ೨. ಕೆ. ಪಿ. ರಾಮಕೃಷ್ಣ ಶೆಟ್ಟಿ, ಬೋರ್ಡ್ಡ ಎಲಿಮೆಂಟರಿ ಸ್ಕೂಲ್ ಮುಲ್ಕಿ. ೩. ಎಂ ಆನಂದ ಶೇಕರ, ಬೋರ್ಡ್ಡ ಎಲಿಮೆಂಟರಿ ಸ್ಕೂಲ್ ಮುಲ್ಕಿ. ೪. ಎಂ. ಸದಾನಂದ ಶೆಟ್ಟಿ, ಬೋರ್ಡ್ಡ ಎಲಿಮೆಂಟರಿ ಸ್ಕೂಲು ಮುಲ್ಕಿ **೫. ಬಿ. ಮುಂಡಪ್ಪ.** ಸಂಪಾದಕ ಮಕ್ಕಳ ತೊದಲು ಬೊಕ್ಕ ಪಟ್ಣ. ೬. ಡೇನಿಸ್ ಪಿಂಟೊ, ಬೊಕ್ಕಪಟ್ಣ ಶಾಲೆ. ೭. ಪುತ್ತೂರು ಕೃಷ್ಣನಾಯಕ್, ಜಿ. ಟಿ ಸಿ ಗವರ್ನ್ಮೆಂಟ್ ಕೊಲೇಜು, ಮಂಗಳೂರು. ೮. ಶ್ರೀಮತಿ ಸುರತ್ಕಲ್ ೯. ರುಕ್ಕುಬಾಯಿ. ಕಾಡಿಪಟ್ಣಾ ಕಾಫೀರ ಟಿ. ಕರ್ಕೇರ, ಮುಂಬಾಯಿ ೧೦. ಮೂಲ್ಕಿ ಶೇಷಪ್ಪ ಜಿ. ಶಿರಿಯಾನ್, ಮುಂಬಾಯಿ. ೧೧ ಜೋನ್ ಡೊಮೆಲೊ, ಮುಂಬಾಯಿ. ೧೨. **ಪಿ. ಪಿ. ಶೆಟ್ಟಿ,** ಜೈನ್, ಪಾಣೆಮಂಗಳೂರು. ೧೩. ಬಿ. ಪಿ. ವಾಸುದೇವ, ಬೊಕ್ಕ ಪಟ್ಣ ಶಾಲೆ. ೧೪. ನ್ಯಾತಡಿ ಉಮಾಪತಿ ಬಂಗೇರ, ದರ್ಬಾರ್ ರೋಡ್ ಪುತ್ತೂರು. ೧೫. **ಪಿ. ಏಳ್ಮುಡಿ ನಾಗಪ್ಪ ಸಾಲಿಯನ್,** ಪುತ್ತೂರು. ೧೬. ಪಿ. ವಾಮನ ವಾಸುದೇವ ನ್ಯಾಕ, ಪಾಣೆಮಂಗಳೂರು ೧೭ **ಟಿ. ಚಂದ್ರರಾಜ ಶೆಟ್ಟಿ,** ಸಿದ್ಧಕಟ್ಟೆ. ೧೮. ಕೆ. ನೇಮು. ಎಸ್. ಅಂಚನ್ ಮುಂಬಾಯಿ: ೧೯. ಬಿ ಕೊರಗಪ್ಪ ಕೋಟ್ಯಾನ್, ಬೋಳೂರು. ೨೦. ಮಿಸ್. ಗುಲಾಬಿ ಬ್ಯಾ, ಕೂಳೂರು. ೨೧. ಎಚ್. ಜೋಹಾರಿ. ಮುಂಬಾಯಿ. ೨೨. ಬಿ. ಮೋನಪ್ಪ ಕೋಟ್ಯಾನ್, ಮುಂಬಾಯಿ. ೨೩ ಎ. ರಾಮಪ್ಪ, ಪೆರ್ರಿ ಕಂಪೆನಿ, ಮಂಗಳೂರು. ೨೪. **ಶ್ರೀಮತಿ ಸುಲೋಚನಾ ಬ್ಯಾ,** ಅತ್ತಾವರ. ೨೫. ಕೇಶವ ಕಕ್ಕಿಲ್ಲಾಯ ಕೊಡಿಯಾಲಬೈಲು,

೧ನೇ ಬಹುಮಾನ ಕೆಮರವು ನಂಬ್ರ ೨೪ನೇಯವರಿಗೆ ಸಿಕ್ಕಿರುತ್ತದೆ.

ಕಲಾ ವಾತ್ಸಲ್ಯದಲ್ಲಿ ಪ್ರಥಮ ಸ್ಥಾನವನ್ನು ಪಡೆದವರು ನಂಬ್ರ ೧೫ರವರು. ಇವರು ತಮ್ಮ ಒಗಟು ಪತ್ರಿಕೆಯ ಅಂಚಿನಲ್ಲಿ ಚಿತ್ರಿಸಿದ ಚಿತ್ರಗಳ ಪೈಕಿ ಶ್ರೀ ಕೃಷ್ಣನ ಚಿತ್ರವೊಂದು ಅತ್ಯಂತ ರಮಣೀಯವಿದ್ದು ಎಂತಹವರನ್ನೂ ಒಮ್ಮೆ ಮುಗ್ಧಕರನ್ನಾಗಿ ಮಾಡಬಲ್ಲದು. ಆ ಚಿತ್ರವನ್ನು ಮುಂದಿನ ಪತ್ರಿಕೆಯಲ್ಲಿ ಕಾಣಬಹುದು. ಇವರು ಸಂಪೂರ್ಣ ವಿಳಾಸ ಕೊಡುವ ವರೇಗೆ ಇವರಿಗೆ ಕೊಡಲಿದ್ದ ಬಹುಮಾನವನ್ನು ಬಾಕಿ ಇಡಬೇಕಾಗಿದೆ. ನಂಬ್ರ ೫. ೧೨. ೧೭. ಇವರೂ ಚಲೋರೀತಿಯಲ್ಲಿ ಒಗಟು ಬಿಡಿಸಿರುವರು. ಇವರಿಗೂ ಒಂದೊಂದು ಕಥೆ ಪುಸ್ತಕವನ್ನು ಇನಾಮಾಗಿ ಕೊಡುವೆವು.

**ಬರುವ ತಿಂಗಳ ಸುವರ್ಣಪದಕದ ಒಗಟನ್ನು ಕಾಯಿರಿ!**